**MEMORANDUM REGARDING DELEGATED LEGISLATION**

| | |
|---|---|
| **Clause 2:** | item (ii a) of sub-section (2) of section 63, sought to be inserted, empowers to the State Government to make rules regarding the manner and the terms and not for subsequent sale or processing. |

The proposed delegation of Legislative power is normal in character.

**SHAMANOOR SHIVASHANKARAPPA**
Minister for Agricultural Marketing
and Horticulture

**P. OMPRAKASHA**
Secretary
Karnataka Legislative Assembly

**ANNEXURE**

**EXTRACT FROM THE KARNATAKA AGRICULTURAL PRODUCE MARKETING (REGULATION AND DEVELOPMENT) ACT, 1966**

**(KARNATAKA ACT 27 OF 1966)**

**xx** **xx** **xx**

**63. Powers and duties of market committee.-** (2) **xx** **xx** **xx**

(ii) provide the necessary facilities for the 1[transport and marketing]1 of agricultural produce in the yards and outside APMC 498 the markets and sub-markets in the market area;

**xx** **xx** **xx**

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಮಂಗಳವಾರ, ಫೆಬ್ರವರಿ ೨೫, ೨೦೧೪ (ಫಾಲ್ಗುಣ ೬, ಶಕ ವರ್ಷ ೧೯೩೫) | ನಂ. ೧೫೬ |
| **Part – IV-A** | **Bangalore, Tuesday, February 25, 2014 (Phalguna 6, Shaka Varsha 1935)** | **No. 156** |

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/38/LA Bill/2014, Bangalore, Dated: 25-2-2014**

The following Bill was introduced in Legislative Assembly on 25-2-2014

**ಕರ್ನಾಟಕ ವಿಧಾನ ಸಭೆ**
**ಹದಿನಾಲ್ಕನೇ ವಿಧಾನ ಸಭೆ**
**ಮೂರನೇ ಅಧಿವೇಶನ**
**ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ವಿಧೇಯಕ, 2014**
**(2014ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 38)**

ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ನ್ನು (1977ರ ಕರ್ನಾಟಕ ಅಧಿನಿಯಮ 14) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೈದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ಅಧಿನಿಯಮ, 2014 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 503ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ (1977ರ ಕರ್ನಾಟಕ ಅಧಿನಿಯಮ 14) 503ನೇ ಪ್ರಕರಣದ (4)ನೇ ಉಪಪ್ರಕರಣದ ತರುವಾಯ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಹಾಗೆ ರಚಿಸಲ್ಪಟ್ಟ ದೊಡ್ಡ ನಗರ ಪ್ರದೇಶವು ಯಾವುದೇ ಹೊಸದಾಗಿ ಸೇರಿಸಲ್ಪಟ್ಟ ಪ್ರದೇಶವನ್ನು ಹೊಂದಿರದಿದ್ದಲ್ಲಿ ಹಾಗೂ ದೊಡ್ಡ ನಗರ ಪ್ರದೇಶವೆಂದು ಘೋಷಿಸಿದ ದಿನಾಂಕಕ್ಕೂ ಮೊದಲು ಒಂದು ವರ್ಷದೊಳಗೆ ಅಂಥ ಸಣ್ಣ ನಗರ ಪ್ರದೇಶಕ್ಕೆ ಚುನಾವಣೆ ನಡೆದಿದ್ದಲ್ಲಿ, ಹಾಗೆ ಚುನಾಯಿತರಾದ ಸಣ್ಣ ನಗರ ಪ್ರದೇಶದ ಸದಸ್ಯರ ಅವಧಿಯು ಮುಕ್ತಾಯವಾಗುವವರೆಗೆ (ನಗರ ಪುರಸಭೆಯನ್ನು ಸ್ಥಾಪಿಸಿರಲಿ ಅಥವಾ ಇಲ್ಲದಿರಲಿ ಅದನ್ನು ಗಣನೆಗೆ ತೆಗೆದುಕೊಳ್ಳದೆ) ನಿಗಮದ ರಚನೆಗಾಗಿ ಅಂಥ ದೊಡ್ಡ ನಗರ ಪ್ರದೇಶಕ್ಕೆ ಚುನಾವಣೆಯನ್ನು ನಡೆಸುವ ಅಗತ್ಯವಿರುವುದಿಲ್ಲ ಹಾಗೂ ಸಣ್ಣ ನಗರ ಪ್ರದೇಶದ ಸದಸ್ಯರನ್ನು ಹಾಗೆ ಚುನಾಯಿತರಾದ ಅವರ ಅವಧಿಯು ಪೂರ್ಣಗೊಳ್ಳುವವರೆಗೆ ಹಾಗೆ ರಚಿಸಲಾದ ದೊಡ್ಡ ನಗರ ಪ್ರದೇಶದ ಸದಸ್ಯರನ್ನಾಗಿ ಮುಂದುವರಿಸತಕ್ಕದ್ದು ಹಾಗೂ ಸದರಿ ಚುನಾಯಿತ ಸದಸ್ಯರನ್ನು 7ನೇ ಪ್ರಕರಣದ ಅಡಿಯಲ್ಲಿ ನಿಗಮದ ಕೌನ್ಸಿಲರ್‌ಗಳೆಂದು ಪರಿಗಣಿಸುವ ಮೂಲಕ ನಿಗಮವನ್ನು ರಚಿಸತಕ್ಕದ್ದು."

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಸಣ್ಣ ನಗರ ಪ್ರದೇಶವನ್ನು ದೊಡ್ಡ ನಗರ ಪ್ರದೇಶವೆಂದು ಘೋಷಿಸಲ್ಪಟ್ಟಿದ್ದು ಮತ್ತು ಅದಕ್ಕೆ ಯಾವುದೇ ಹೊಸದಾದ ಪ್ರದೇಶವನ್ನು ಸೇರಿಸಿರದಿದ್ದಲ್ಲಿ ಹಾಗೂ ಹಾಗೆ ದೊಡ್ಡ ನಗರವೆಂದು ಘೋಷಿಸಲ್ಪಟ್ಟ ದಿನಾಂಕಕ್ಕೆ ಮೊದಲು, ಒಂದು ವರ್ಷವನ್ನು ಮೀರದಂಥ ಅವಧಿಯೊಳಗೆ, ಅಂಥ ಸಣ್ಣ ನಗರ ಪ್ರದೇಶಕ್ಕೆ ಚುನಾವಣೆ ನಡೆದಿದ್ದಲ್ಲಿ, ಅಂಥ ಸಂದರ್ಭಗಳಲ್ಲಿ ಅಂಥ ಸಣ್ಣ ನಗರ ಪ್ರದೇಶದ ಚುನಾಯಿತ ಸದಸ್ಯರ ಅವಧಿಯನ್ನು ಅವರ ಅವಧಿಯು ಮುಕ್ತಾಯವಾಗುವವರೆಗೆ ಘೋಷಿಸಲಾದ ದೊಡ್ಡ ನಗರ ಪ್ರದೇಶದ ಚುನಾಯಿತ ಸದಸ್ಯರಾಗಿ ಮುಂದುವರಿಸುವುದಕ್ಕಾಗಿ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ (1977 ಕರ್ನಾಟಕ ಅಧಿನಿಯಮ 14) 503ನೇ ಪ್ರಕರಣವನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ವಿನಯ ಕುಮಾರ್ ಸೊರಕೆ**
ನಗರಾಭಿವೃದ್ಧಿ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**Xxx xx xx**

**ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ರ (1977ರ ಕರ್ನಾಟಕ ಅಧಿನಿಯಮ ಸಂಖ್ಯೆ 14)**

**ಉದ್ಧೃತ ಭಾಗ**

**Xxx xx xx**

**503. ಈ ಅಧಿನಿಯಮದ ಮೇರೆಗೆ ನಗರ ಪೌರಸಭಾ ಪ್ರದೇಶವನ್ನು ಒಂದು ದೊಡ್ಡನಗರ ಪ್ರದೇಶವೆಂದು ಘೋಷಿಸುವುದು.–** (1) 3ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು ಯಾವ ಪೌರಸಭೆಯ ಪ್ರದೇಶಕ್ಕೆ 1964ರ ಕರ್ನಾಟಕ ಪೌರಸಭೆಗಳ ಅಧಿನಿಯಮದ (1964ರ ಕರ್ನಾಟಕ ಅಧಿನಿಯಮ 22) ಅಡಿಯಲ್ಲಿ ಒಂದು ನಗರ ಪೌರಸಭೆಯನ್ನು ರಚಿಸಲಾಗಿದೆಯೋ ಆ ಪೌರಸಭೆಯನ್ನು ರಾಜ್ಯಪಾಲರು ಅಧಿಸೂಚನೆಯ ಮೂಲಕ ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬೇಕಾದ ದಿನಾಂಕದಿಂದ ಜಾರಿಗೆ ಬರುವಂತೆ ಈ ಅಧಿನಿಯಮದ 3ನೇ ಪ್ರಕರಣದ ಅಡಿಯಲ್ಲಿ ನಿರ್ದಿಷ್ಟಪಡಿಸಿದ ದೊಡ್ಡ ನಗರ ಪ್ರದೇಶವೆಂದು ಘೋಷಿಸಬಹುದು.

**Xxx xx xx**

(4) (1)ನೇ ಉಪ–ಪ್ರಕರಣದಲ್ಲಿ ಉಲ್ಲೇಖಿಸಿದ ಘೋಷಣೆಯ ದಿನಾಂಕದಿಂದ ಆರು ತಿಂಗಳುಗಳ ಅವಧಿಯೊಳಗೆ ಈ ಅಧಿನಿಯಮದ ಅಡಿಯಲ್ಲಿ ದೊಡ್ಡನಗರ ಪ್ರದೇಶಕ್ಕಾಗಿ ಕ್ರಮಬದ್ಧವಾಗಿ ಒಂದು ನಿಗಮವನ್ನು ರಚಿಸತಕ್ಕದ್ದು ಮತ್ತು ಹಾಗೆ ರಚಿತವಾದ ನಿಗಮದ ಮೊದಲ ಸಭೆಯ ದಿನಾಂಕದಿಂದ ನಿಗಮದ ಅಧಿಕಾರಗಳನ್ನು ಚಲಾಯಿಸುತ್ತಿರುವ ಮತ್ತು ಕರ್ತವ್ಯಗಳನ್ನು ನೆರವೇರಿಸುತ್ತಿರುವ ನಿಕಾಯವು ವಿಘಟಿತವಾಗತಕ್ಕದ್ದು.

**Xxx xx xx**

## KARNATAKA LEGISLATIVE ASSEMBLY
## FOURTEENTH LEGISLATIVE ASSEMBLY
## THIRD SESSION
## THE KARNATAKA MUNICIPAL CORPORATIONS (AMENDMENT) BILL, 2014
## (L.A. Bill No. 38 of 2014)

A Bill further to amend the Karnataka Municipal Corporations Act, 1976.

Whereas it is expedient further to amend the Karnataka Municipal Corporations Act, 1976 (Karnataka Act 14 of 1977) for the purposes hereinafter appearing;

Be it enacted by the Karnataka State Legislature in the Sixty Fifth year of the Republic of India as follows, namely:-

**1. Short title and commencement.–** (1) This Act may be called the Karnataka Municipal Corporations (Amendment) Act, 2014.

(2) It shall come into force at once.

**2. Amendment of section 503.-** In section 503 of the Karnataka Municipal Corporations Act, 1976 (Karnataka Act 14 of 1977) after sub-section (4), the following proviso, shall be inserted, namely:-

> "Provided that where the larger urban area so constituted does not have any newly added area and the election to such smaller urban area was held within one year before the date of declaration of Larger urban area, the election to such larger urban area for constitution of a corporation need not to be held till the completion of the term of members of smaller urban area so elected (irrespective of whether City Municipal Council was constituted or not) and the members of smaller urban area shall continue to be members of the larger urban area corporation to be constituted till the completion of their term so elected and a corporation shall be constituted by treating the said elected members as councilors of the corporation under Section 7 ".

### STATEMENT OF OBJECTS AND REASONS

It is considered necessary to amend section 503 of the Karnataka Municipal Corporations Act, 1976 (Karnataka Act 14 of 1977) to continue the term of elected members of Smaller Urban Area till the compeltion of their term which have been declared as Larger Urban Area and no additional area is added to it and where election to such Smaller Urban Area was held not more than one year prior to the date of such declaration.

Hence the Bill.

### FINANCIAL MEMORANDUM

There is no extra expenditure involved in the proposed Legislative measure.

**VINAY KUMAR SORAKE**
Minister for Urban Development

**P. OMPRAKASHA**
Secretary
Karnataka Legislative Assembly

**ANNEXURE**

**EXTRACT FROM THE KARNATAKA MUNICIPAL CORPORATIONS ACT, 1976**

**(KARNATAKA ACT 14 OF 1977)**

**XX XX XX**

**503. Declaration of city municipal area as a larger urban area under this Act.-**(1) Subject to the provisions of section 3, the Governor may declare by notification that any municipal area for which a City Municipal Council is constituted under the Karnataka Municipalities Act, 1964 (Karnataka Act 22 of 1964) shall with effect from the date to be specified in such notification to be a larger urban area specified under section 3 of this Act.

**XX XX XX**

(4) A Corporation shall be duly constituted for the larger urban area under this Act within a period of six months from the date of declaration referred to in sub-section (1) and from the date of first meeting of the corporation as so constituted the body exercising the powers and performing the duties of the Corporation shall stand dissolved.

**XX XX XX**

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಫೆಬ್ರವರಿ ೨೫, ೨೦೧೪ (ಫಾಲ್ಗುಣ ೬, ಶಕ ವರ್ಷ ೧೯೩೫) | ನಂ. ೧೫೭ |
|---|---|---|
| Part – IV-A | Bangalore, Tuesday, February 25, 2014 (Phalguna 6, Shaka Varsha 1935) | No. 157 |

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 03 ಎಂಆರ್ಇ 2014, ಬೆಂಗಳೂರು, ದಿನಾಂಕ: 25–02–2014**

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 10**ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ 13 ಜನರನ್ನು ತೀರ್ಥಹಳ್ಳಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸದಸ್ಯರುಗಳನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಿದೆ:

| ಕ್ರ. ಸಂ. | ಹೆಸರು ಮತ್ತು ವಿಳಾಸ<br>ಶ್ರೀಯುತರು | ಹುದ್ದೆ |
|---|---|---|
| 1. | ಶ್ರೀ ಜಿ.ಎಸ್.ನಾರಾಯಣರಾವ್ ಬಿನ್ ಜಿ.ಪಿ.ಶ್ರೀನಿವಾಸರಾವ್<br>ಗುಡ್ಡೇಕೊಪ್ಪ, ಗುಡ್ಡೇಕೊಪ್ಪ ಅಂಚೆ, ತೀರ್ಥಹಳ್ಳಿ ತಾಲ್ಲೂಕು. | ಅಧ್ಯಕ್ಷರು |
| 2. | ಶ್ರೀ ಎ.ಎಸ್.ಅರುಣಕುಮಾರ್ ಬಿನ್. ಸುಧಾಕರಗೌಡ,<br>ಅತ್ತಿಗದ್ದೆ, ಕನ್ನಂಗಿ ಅಂಚೆ, ತೀರ್ಥಹಳ್ಳಿ ತಾಲ್ಲೂಕು | ಉಪಾಧ್ಯಕ್ಷರು |
| 3. | ಶ್ರೀ ಅಣ್ಣಪ್ಪ ಬಿನ್ ತಿಮ್ಮನಾಯ್ಕ<br>ಕಲ್ಲುಕೊಪ್ಪ–ಹಣಗೆರೆ ಅಂಚೆ, ತೀರ್ಥಹಳ್ಳಿ ತಾಲ್ಲೂಕು | ಸದಸ್ಯರು |
| 4 | ಶ್ರೀ ಎ.ಆರ್.ಮಹೇಶ ಬಿನ್ ರಾಮಣ್ಣಗೌಡ,<br>ಅಗಳಬಾಗಿಲು, ಆರಗ ಅಂಚೆ, ತೀರ್ಥಹಳ್ಳಿ ತಾಲ್ಲೂಕು | ಸದಸ್ಯರು |
| 5 | ಶ್ರೀ ರಾಜಶೇಕರ ಬಿನ್. ಗುಂಡಾನಾಯ್ಕ,<br>ಬೊಬ್ಬಿ, ಸುಂಕದಹೊಳೆ ಅಂಚೆ, ತೀರ್ಥಹಳ್ಳಿ ತಾಲ್ಲೂಕು | ಸದಸ್ಯರು |
| 6 | ಶ್ರೀ ವಿ.ಕೃಷ್ಣಮೂರ್ತಿ ಬಿನ್ ಬೆಳ್ಳಪ್ಪಗೌಡ,<br>ಸೀಬಿನಕೆರೆ, ಸೀಬಿನಕೆರೆ ಅಂಚೆ, ತೀರ್ಥಹಳ್ಳಿ ತಾಲ್ಲೂಕು | ಸದಸ್ಯರು |
| 7 | ಶ್ರೀ ಈಶ್ವರ ಬಿನ್ ಧರ್ಮನಾಯ್ಕ<br>ಹೆದ್ದೂರು, ಹೆದ್ದೂರು ಅಂಚೆ, ತೀರ್ಥಹಳ್ಳಿ ತಾಲ್ಲೂಕು | ಸದಸ್ಯರು |

| ಕ್ರ. ಸಂ. | ಹೆಸರು ಮತ್ತು ವಿಳಾಸ<br>ಶ್ರೀಯುತರು | ಹುದ್ದೆ |
|---|---|---|
| 8 | ಶ್ರೀ ಬಿ.ಜಿ.ಸತೀಶ್ಚಂದ್ರ ಬಿನ್ ಬಿ.ಎಂ. ಗೋಪಾಲಕೃಷ್ಣ<br>ಬಳಗೋಡು, ಅರಳಸುರಳಿ ಅಂಚೆ, ತೀರ್ಥಹಳ್ಳಿ ತಾಲ್ಲೂಕು | ಸದಸ್ಯರು |
| 9 | ಶ್ರೀಮತಿ ಹೆಚ್.ವಿ.ಅನ್ನಪೂರ್ಣ ಕೋಂ ಯು.ಎನ್.ಮೋಹನ್<br>ಕಡ್ತೂರು, ಕಡ್ತೂರು ಅಂಚೆ, ತೀರ್ಥಹಳ್ಳಿ ತಾಲ್ಲೂಕು | ಸದಸ್ಯರು |
| 10 | ಶ್ರೀ ಗಣಪತಿ ಬಿನ್. ಶೇಷನಾಯ್ಕ<br>ಮಾವಿನಕೊಡಿಗೆ, ಅರಳಸುರಳಿ ಅಂಚೆ, ತೀರ್ಥಹಳ್ಳಿ ತಾಲ್ಲೂಕು | ಸದಸ್ಯರು |
| 11 | ಶ್ರೀ ಡಿ.ಪಿ.ವಿಶ್ವನಾಥ ಬಿನ್ ಎಸ್ ಪದ್ಮನಾಭ<br>ಸಂಪಗಾರು, ದೇಮ್ಲಾಪುರ ಅಂಚೆ, ತೀರ್ಥಹಳ್ಳಿ ತಾಲ್ಲೂಕು | ಸದಸ್ಯರು |
| 12 | ಶ್ರೀ ಡಿ.ಜಿ.ಹರೀಶ್ ಬಿನ್ ಡಿ. ಗುರುಮೂರ್ತಿಭಟ್ಟ,<br>ಮೇಳಿಗೆ, ಮೇಳಿಗೆ ಅಂಚೆ, ತೀರ್ಥಹಳ್ಳಿ ತಾಲ್ಲೂಕು | ಸದಸ್ಯರು |
| 13 | ಶ್ರೀ ಕೆ.ಎಸ್.ನರೇಂದ್ರಕಾಮತ್ ಬಿನ್ ಸೀತಾರಾಮ ಕಾಮತ್,<br>ಆಜಾದ್ ರಸ್ತೆ, ತೀರ್ಥಹಳ್ಳಿ ಅಂಚೆ, ತೀರ್ಥಹಳ್ಳಿ ತಾಲ್ಲೂಕು | ಸದಸ್ಯರು |

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 10(2)** ರಲ್ಲಿನ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಮೇಲಿನಂತೆ ನಾಮ ನಿರ್ದೇಶನಗೊಂಡಿರುವ ಸದಸ್ಯರುಗಳ ಪೈಕಿ, **"ಶ್ರೀ ಜಿ.ಎಸ್. ನಾರಾಯಣರಾವ್ ಬಿನ್ ಜಿ.ಪಿ. ಶ್ರೀನಿವಾಸರಾವ್" ಗುಡ್ಡೇಕೊಪ್ಪ, ಗುಡ್ಡೇಕೊಪ್ಪ ಅಂಚೆ, ತೀರ್ಥಹಳ್ಳಿ ತಾಲ್ಲೂಕು** ಇವರನ್ನು **ಅಧ್ಯಕ್ಷರನ್ನಾಗಿ** ಹಾಗೂ **"ಶ್ರೀ ಎ.ಎಸ್. ಅರುಣಕುಮಾರ್ ಬಿನ್ ಸುಧಾಕರಗೌಡ" ಅತ್ತಿಗದ್ದೆ, ಕನ್ನಂಗಿ ಅಂಚೆ, ತೀರ್ಥಹಳ್ಳಿ ತಾಲ್ಲೂಕು** ಇವರನ್ನು **ಉಪಾಧ್ಯಕ್ಷರನ್ನಾಗಿ** ಸದರಿ ಸಮಿತಿಗೆ ನಾಮಕರಣ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಈ. ಪಾಪಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಫೆಬ್ರವರಿ ೨೬, ೨೦೧೪ (ಫಾಲ್ಗುಣ ೭, ಶಕ ವರ್ಷ ೧೯೩೫) | ನಂ. ೧೫೯ |
|---|---|---|
| **Part – IV-A** | **Bangalore, Wednesday, February 26, 2014 (Phalguna 7, Shaka Varsha 1935)** | **No. 159** |

## URBAN DEVELOPMENT SECRETARIAT

## NOTIFICATION

### No. UDD 32 MLR 2014, Bangalore, dated: 26.02.2014

As per the Interim Order of the Hon'ble High Court of Karnataka dated 24.02.2014 in Writ Appleal No. 89/2014 (LB-RES), W.A. 240-277/2014, in partial modification of the Notification No. UDD 118 MLR 2013, dated 21.08.2013 Government hereby allots the office of the Mayor and Deputy Mayor in respect of the Mangalore City Corporation for the 16th Term as detailed below;

| Sl. No. | Name of the City Corporation | Mayor | Deputy Mayor |
|---|---|---|---|
| 7 | Mangalore | G | G(W) |

By order and in the name of the Governor of Karnataka

**Siddiq Pasha**
Under Secretary to Government
Urban Development Department

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಬುಧವಾರ, ಫೆಬ್ರವರಿ ೨೬, ೨೦೧೪ (ಫಾಲ್ಗುಣ ೭, ಶಕ ವರ್ಷ ೧೯೩೫) | ನಂ. ೧೬೦ |
| Part – IV-A | Bangalore, Wednesday, February 26, 2014 (Phalguna 7, Shaka Varsha 1935) | No. 160 |

## ಶಿಕ್ಷಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಡಿ 154 ಡಿಸಿಇ 2013(ಭಾಗ), ಬೆಂಗಳೂರು, ದಿನಾಂಕ: 26–02–2014**

ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿ ವರ್ಗಾವಣೆ ನಿಯಂತ್ರಿಸುವ ಸಲುವಾಗಿ ಹೊರಡಿಸಿರುವ ಕರ್ನಾಟಕ ರಾಜ್ಯ ನಾಗರೀಕ ಸೇವೆಗಳು (ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2012ರ ಸೆಕ್ಷನ್ 1(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮವನ್ನು ದಿನಾಂಕ:01.04.2014ರಿಂದ ಜಾರಿಗೆ ತರಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಲಿಂಗ**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – III | ಬೆಂಗಳೂರು, ಶನಿವಾರ, ಫೆಬ್ರವರಿ ೨೨, ೨೦೧೪ (ಫಾಲ್ಗುಣ ೩, ಶಕ ವರ್ಷ ೧೯೩೫) | ನಂ. ೧೪೦ |
| Part – III | Bangalore, Saturday, February 22, 2014 (Phalguna 3, Shaka Varsha 1935) | No. 140 |

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

### 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ಕಲಂ 3(1)ರಡಿ ಅಧಿಸೂಚನೆ

**ಸಂಖ್ಯೆ: ಸಿಐ 14 ಎಸ್‌ಪಿಕ್ಯೂ 2014, ಬೆಂಗಳೂರು, ದಿನಾಂಕ: 22–02–2014**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ 1966ರ (ಕರ್ನಾಟಕ ಕಾಯ್ದೆ 18) ವಿಧಿ 3(1)ರಂತೆ ದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರವು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ಕಾಲಂ 2ರಲ್ಲಿ ನಮೂದಿಸಿರುವ ಚಾಮರಾಜನಗರ ಜಿಲ್ಲೆ, ಚಾಮರಾಜನಗರ ತಾಲ್ಲೂಕು, ಕಸಬಾ ಹೋಬಳಿ, ಕೆಲ್ಲಂಬಳ್ಳಿ ಗ್ರಾಮದ ಸರ್ವೆ ನಂಬರ್‌ನಲ್ಲಿ ಈ ಕೆಳಕಂಡ ಪಟ್ಟಿಯಲ್ಲಿನ ಕಾಲಂ 6ರಲ್ಲಿ ತೋರಿಸಿರುವ ಚಕ್ಕುಬಂದಿಯುಳ್ಳ ಕಾಲಂ 3 ರಿಂದ 5ರಲ್ಲಿ ನಮೂದಿಸಿರುವ ವಿಸ್ತೀರ್ಣದ ಜಮೀನುಗಳನ್ನು ಕೈಗಾರಿಕಾ ಪ್ರದೇಶವೆಂದು ಈ ಮೂಲಕ ಘೋಷಿಸಿದೆ.

**ಜಿಲ್ಲೆ: ಚಾಮರಾಜನಗರ** **ಹೋಬಳಿ: ಕಸಬಾ**

**ತಾಲ್ಲೂಕು: ಚಾಮರಾಜನಗರ** **ಗ್ರಾಮ: ಕೆಲ್ಲಂಬಳ್ಳಿ**

| ಕ್ರ. ಸಂ. | ಸರ್ವೆ ನಂ | ಅಂದಾಜು ವಿಸ್ತೀರ್ಣ | | | ಚಕ್ಕುಬಂದಿ | | | |
|---|---|---|---|---|---|---|---|---|
| | | ಐನ್ ಎ–ಗು | ಖರಾಬು ಎ–ಗು | ಬಾಕಿ ಎ–ಗು | ಪೂರ್ವ ಸರ್ವೆ ನಂ. | ಪಶ್ಚಿಮ ಸರ್ವೆ ನಂ. | ಉತ್ತರ ಸರ್ವೆ ನಂ. | ದಕ್ಷಿಣ ಸರ್ವೆ ನಂ. |
| 1 | 2 | 3 | 4 | 5 | 6 | | | |
| 1 | 119 | 142–31 | 142–31 | –– | ಗ್ರಾಮದ ಗಡಿ ಮತ್ತು 409 | ಬದನಗುಪ್ಪೆ ಗಡಿ ಮತ್ತು 483, 429 | ಬದನಗುಪ್ಪೆ ಗಡಿ ಮತ್ತು ಚಿಕ್ಕ ಹೊಮ್ಮದ ಗಡಿ ಮತ್ತು 422, 423, 424 | 369, 372, 373, 419, 417 ಮತ್ತು 118 |
| 2 | 369 | 6–32 | 0–02 | 6–30 | 368 | 327 | 119 | 370 |
| 3 | 370 | 3–12 | –– | 3–12 | 367, ಗಾಡಿ | 371 | 369 | 44, 43 |

| ಕ್ರ. ಸಂ. | ಸರ್ವೆ ನಂ | ಅಂದಾಜು ವಿಸ್ತೀರ್ಣ | | | ಚಕ್ಕುಬಂದಿ | | | |
|---|---|---|---|---|---|---|---|---|
| | | ಐನ್ ಎ–ಗು | ಖರಾಬು ಎ–ಗು | ಬಾಕಿ ಎ–ಗು | ಪೂರ್ವ ಸರ್ವೆ ನಂ. | ಪಶ್ಚಿಮ ಸರ್ವೆ ನಂ. | ಉತ್ತರ ಸರ್ವೆ ನಂ. | ದಕ್ಷಿಣ ಸರ್ವೆ ನಂ. |
| **1** | **2** | **3** | **4** | **5** | **6** | | | |
| 4 | 370/2 | 2–11 | –– | 2–11 | ಹಾದಿ | | | |
| 5 | 372 | 6–02 | 0–04 | 5–38 | 369 | 373 | 119 | 371 |
| 6 | 373 | 6–20 | –– | 6–20 | 372 | 419 | 119 | 374 |
| 7 | 419 | 4–00 | –– | 4–00 | 373 | 417 | 119 | 417, 418 |
| 8 | 420 | 5–01 | 0–01 | 5–00 | 119 | 119 | 421 | 119 |
| 9 | 421 | 5–02 | –– | 5–02 | 119 | 119 | 119 | 420 |
| 10 | 422 | 5–00 | 0–04 | 4–36 | 423 | 119 | 427 | 119 |
| 11 | 423 | 5–00 | 0–29 | 4–11 | 424 | 422 | 426 | 119 |
| 12 | 424 | 5–00 | 0–07 | 4–33 | 119 | 423 | 425 | 119 ಸ. ಕಟ್ಟೆ |
| 13 | 425 | 5–00 | 0–09 | 4–31 | 119 | 426 | ಚಿಕ್ಕ ಹೊಮ್ಮದ ಗಡಿ | 424 |
| 14 | 426 | 5–00 | 1–00 | 4–00 | 425 | 427 | ಚಿಕ್ಕ ಹೊಮ್ಮದ ಗಡಿ | 423 |
| 15 | 427 | 5–00 | 0–05 | 4–35 | 4–61 | 426 | 119 | ಚಿಕ್ಕ ಹೊಮ್ಮದ ಗಡಿ |
| 16 | 428 | 4–08 | 0–07 | 4–01 | 429 | ಬದನಗುಪ್ಪೆ ಗಡಿ | 119 | 430 |
| 17 | 429 | 4–08 | 0–10 | 3–38 | 119 | 428 | 119 | 118 |
| 18 | 483 | 4–20 | – | 4–20 | 119 | ಬದನಗುಪ್ಪೆ ಗಡಿ | 119 | 119 |
| 19 | 487 | 4–00 | 0–04 | 3–36 | 488 | 119 | 119 | 119 |
| 20 | 488 | 4–00 | 0–03 | 3–37 | 119 | 487 | 119 | 119 |
| | **ಒಟ್ಟು** | **232–27** | **145–36** | **86–31** | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ಕಲಂ 1(3)ರಡಿ ಅಧಿಸೂಚನೆ**

**ಸಂಖ್ಯೆ: ಸಿಐ 14 ಎಸ್‌ಪಿಕ್ಯೂ 2014, ಬೆಂಗಳೂರು, ದಿನಾಂಕ: 22-02-2014**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ 1966ರ (ಕರ್ನಾಟಕ ಕಾಯ್ದೆ 18) ವಿಧಿ 1(3)ರಂತೆ ದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರವು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ಕಾಲಂ 2ರಲ್ಲಿ ನಮೂದಿಸಿರುವ ಚಾಮರಾಜನಗರ ಜಿಲ್ಲೆ, ಚಾಮರಾಜನಗರ ತಾಲ್ಲೂಕು, ಕಸಬಾ ಹೋಬಳಿ, ಕೆಲ್ಲಂಬಳ್ಳಿ ಗ್ರಾಮದ ಸರ್ವೆ ನಂಬರ್‌ನಲ್ಲಿ ಈ ಕೆಳಕಂಡ ಪಟ್ಟಿಯಲ್ಲಿನ ಕಾಲಂ 6ರಲ್ಲಿ ತೋರಿಸಿರುವ ಚಕ್ಕುಬಂದಿಯುಳ್ಳ ಕಾಲಂ 3ರಿಂದ 5ರಲ್ಲಿ ನಮೂದಿಸಿರುವ ವಿಸ್ತೀರ್ಣದ ಜಮೀನುಗಳಿಗೆ ಮೇಲ್ಕಂಡ ಕಾಯ್ದೆಯ ಅಧ್ಯಾಯ ವಿಧಿ 7(ಎ)ರನ್ವಯ ಕೈಗಾರಿಕಾ ಪ್ರದೇಶವೆಂದು ಈ ಅಧಿಸೂಚನೆಯಲ್ಲಿ ಪ್ರಚುರಗೊಂಡ ದಿನಾಂಕದಿಂದ ಅನ್ವಯವಾಗುವಂತೆ ಘೋಷಿಸಿದೆ.

**ಜಿಲ್ಲೆ: ಚಾಮರಾಜನಗರ** **ಹೋಬಳಿ: ಕಸಬಾ**

**ತಾಲ್ಲೂಕು: ಚಾಮರಾಜನಗರ** **ಗ್ರಾಮ: ಕೆಲ್ಲಂಬಳ್ಳಿ**

| ಕ್ರ. ಸಂ. | ಸರ್ವೆ ನಂ | ಅಂದಾಜು ವಿಸ್ತೀರ್ಣ | | | ಚಕ್ಕುಬಂದಿ | | | |
|---|---|---|---|---|---|---|---|---|
| | | ಐನ್ ಎ-ಗು | ಖರಾಬು ಎ-ಗು | ಬಾಕಿ ಎ-ಗು | ಪೂರ್ವ ಸರ್ವೆ ನಂ. | ಪಶ್ಚಿಮ ಸರ್ವೆ ನಂ. | ಉತ್ತರ ಸರ್ವೆ ನಂ. | ದಕ್ಷಿಣ ಸರ್ವೆ ನಂ. |
| **1** | **2** | **3** | **4** | **5** | **6** | | | |
| 1 | 119 | 142-31 | 142-31 | -- | ಗ್ರಾಮದ ಗಡಿ ಮತ್ತು 409 | ಬದನಗುಪ್ಪೆ ಗಡಿ ಮತ್ತು 483, 429 | ಬದನಗುಪ್ಪೆ ಗಡಿ ಮತ್ತು ಚಿಕ್ಕ ಹೊಮ್ಮದ ಗಡಿ ಮತ್ತು 422, 423, 424 | 369, 372, 373, 419, 417 ಮತ್ತು 118 |
| 2 | 369 | 6-32 | 0-02 | 6-30 | 368 | 327 | 119 | 370 |
| 3 | 370 | 3-12 | -- | 3-12 | 367, ಗಾಡಿ ಹಾದಿ | 371 | 369 | 44, 43 |
| 4 | 370/2 | 2-11 | -- | 2-11 | | | | |
| 5 | 372 | 6-02 | 0-04 | 5-38 | 369 | 373 | 119 | 371 |
| 6 | 373 | 6-20 | -- | 6-20 | 372 | 419 | 119 | 374 |
| 7 | 419 | 4-00 | -- | 4-00 | 373 | 417 | 119 | 417, 418 |
| 8 | 420 | 5-01 | 0-01 | 5-00 | 119 | 119 | 421 | 119 |
| 9 | 421 | 5-02 | -- | 5-02 | 119 | 119 | 119 | 420 |
| 10 | 422 | 5-00 | 0-04 | 4-36 | 423 | 119 | 427 | 119 |
| 11 | 423 | 5-00 | 0-29 | 4-11 | 424 | 422 | 426 | 119 |
| 12 | 424 | 5-00 | 0-07 | 4-33 | 119 | 423 | 425 | 119 ಸ. ಕಟ್ಟೆ |
| 13 | 425 | 5-00 | 0-09 | 4-31 | 119 | 426 | ಚಿಕ್ಕ ಹೊಮ್ಮದ ಗಡಿ | 424 |
| 14 | 426 | 5-00 | 1-00 | 4-00 | 425 | 427 | ಚಿಕ್ಕ ಹೊಮ್ಮದ ಗಡಿ | 423 |

| ಕ್ರ. ಸಂ. | ಸರ್ವೆ ನಂ | ಅಂದಾಜು ವಿಸ್ತೀರ್ಣ | | | ಚಕ್ಕುಬಂದಿ | | | |
|---|---|---|---|---|---|---|---|---|
| | | ಐನ್ ಎ–ಗು | ಖರಾಬು ಎ–ಗು | ಬಾಕಿ ಎ–ಗು | ಪೂರ್ವ ಸರ್ವೆ ನಂ. | ಪಶ್ಚಿಮ ಸರ್ವೆ ನಂ. | ಉತ್ತರ ಸರ್ವೆ ನಂ. | ದಕ್ಷಿಣ ಸರ್ವೆ ನಂ. |
| **1** | **2** | **3** | **4** | **5** | **6** | | | |
| 15 | 427 | 5–00 | 0–05 | 4–35 | 4–61 | 426 | 119 | ಚಿಕ್ಕ ಹೊಮ್ಮದ ಗಡಿ |
| 16 | 428 | 4–08 | 0–07 | 4–01 | 429 | ಬದನಗುಪ್ಪೆ ಗಡಿ | 119 | 430 |
| 17 | 429 | 4–08 | 0–10 | 3–38 | 119 | 428 | 119 | 118 |
| 18 | 483 | 4–20 | – | 4–20 | 119 | ಬದನಗುಪ್ಪೆ ಗಡಿ | 119 | 119 |
| 19 | 487 | 4–00 | 0–04 | 3–36 | 488 | 119 | 119 | 119 |
| 20 | 488 | 4–00 | 0–03 | 3–37 | 119 | 487 | 119 | 119 |
| | ಒಟ್ಟು | **232–27** | **145–36** | **86–31** | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 ರ ಕಲಂ 28(1) ರನ್ವಯ ಅಧಿಸೂಚನೆ.**

**ಸಂಖ್ಯೆ: ಸಿಐ 14 ಎಸ್‌ಪಿಕ್ಯೂ 2014, ಬೆಂಗಳೂರು, ದಿನಾಂಕ: 22.02.2014**

ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಜಮೀನುಗಳು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ, ಕೈಗಾರಿಕಾ ಸ್ಥಾಪನೆಗಾಗಿ ಅಭಿವೃದ್ಧಿಪಡಿಸುವ ಉದ್ದೇಶಕ್ಕಾಗಿ ಬೇಕಾಗಿದೆ ಎಂಬುದಾಗಿ ಕರ್ನಾಟಕ ಸರ್ಕಾರವು ಅಭಿಪ್ರಾಯಪಟ್ಟಿದೆ.

1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 28(1) (1966ರ 18ನೇ ನಂ. ಕಾಯ್ದೆಯ) ಪ್ರಕಾರ ದತ್ತವಾದ ಅಧಿಕಾರದ ಮೇರೆಗೆ ಸದರಿ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳುವ ಉದ್ದೇಶದಿಂದ ಈ ಅಧಿಸೂಚನೆ ಪ್ರಕಟಿಸಲಾಗಿದೆ.

ಮೇಲ್ಕಂಡ ಕಾಯ್ದೆಯ ವಿಧಿ 35 ರ ಮೇರೆಗೆ ಕೆಲಸ ನಿರ್ವಹಿಸಲು ಈ ಜಮೀನುಗಳಿಗೆ ಪ್ರವೇಶಿಸುವ ಯಾವುದೇ ವ್ಯಕ್ತಿಯನ್ನು ತಡೆಯುದಾಗಲೀ ಅಥವಾ ಅಡ್ಡಿಪಡಿಸುವುದಾಗಲೀ ಮಾಡಕೂಡದೆಂದು ಈ ಜಮೀನುಗಳಲ್ಲಿ ಆಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೂ ಈ ಮೂಲಕ ಎಚ್ಚರಿಸಲಾಗಿದೆ.

ಈ ಅಧಿಸೂಚನೆ ಪ್ರಕಟಣೆಯಾದ ದಿನಾಂಕದ ನಂತರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಮೈಸೂರು ವಿಭಾಗೀಯ ವಿಶೇಷ ಭೂಸ್ವಾಧೀನಾಧಿಕಾರಿಯವರ ಅನುಮತಿ ಇಲ್ಲದೇ ಸದರಿ ಜಮೀನನ್ನು ಒಪ್ಪಂದ, ಕ್ರಯ, ಭೋಗ್ಯ, ಗುತ್ತಿಗೆ ಅದಲು ಬದಲು ಅಥವಾ ಮತ್ತಾವುದೇ ರೀತಿಯಲ್ಲಿ ವಿಲೇವಾರಿ ಮಾಡುವಂತಿಲ್ಲ ಮತ್ತು ಕಟ್ಟಡಗಳ ನಿರ್ಮಾಣ ಅಥವಾ ಮತ್ತಿತರ ಯಾವುದೇ ಅಭಿವೃದ್ಧಿ ಕೆಲಸಗಳನ್ನು ಮಾಡಕೂಡದು. ಹಾಗೆ ಮಾಡಿದ್ದಲ್ಲಿ 1894ರ ಭೂ ಸ್ವಾಧೀನ ಕಾಯ್ದೆಯ ಕಲಂ 24ರ (ನಿಯಮ 7)ರ ಅನ್ವಯ (1894ರ ಕೇಂದ್ರ ಕಾಯ್ದೆ 1) 1961ರ ಕರ್ನಾಟಕ ಕಾಯ್ದೆ 17ರಲ್ಲಿ ತಿದ್ದುಪಡಿಯಾದಂತೆ ಮತ್ತು 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಅಧಿನಿಯಮದ ವಿಧಿ 30ರ ಅನ್ವಯ ಅಂತಿಮವಾಗಿ ಭೂಸ್ವಾಧೀನಪಡಿಸಿಕೊಂಡು ಪರಿಹಾರ ನಿಗದಿಪಡಿಸುವಾಗ ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ. ಮತ್ತು ಅಂತಿಮವಾಗಿ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲಾಗುವುದು. ಈ ಜಮೀನುಗಳ ನಕ್ಷೆಯನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಮೈಸೂರು ವಿಶೇಷ ಭೂಸ್ವಾಧೀನಾಧಿಕಾರಿಯವರ ಕಛೇರಿಯಲ್ಲಿ ಪರಿಶೀಲನೆಗೆ ಇಟ್ಟಿದೆ.

**ಜಿಲ್ಲೆ: ಚಾಮರಾಜನಗರ** **ತಾಲ್ಲೂಕು: ಚಾಮರಾಜನಗರ** **ಹೋಬಳಿ: ಕಸಬಾ** **ಗ್ರಾಮ: ಕೆಲ್ಲಂಬಳ್ಳಿ**

| ಕ್ರ. ಸಂ. | ಸರ್ವೆ ನಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ವಿಸ್ತೀರ್ಣ | | | ತರಹೆ | ಆಕಾರ | ಚಕ್ಕುಬಂದಿ | | | |
|---|---|---|---|---|---|---|---|---|---|---|---|---|
| | | | | ಐನ್ ಎ–ಗು | ಖರಾಬು ಎ–ಗು | ಬಾಕಿ ಎ–ಗು | | | ಪೂರ್ವ ಸರ್ವೆ ನಂ. | ಪಶ್ಚಿಮ ಸರ್ವೆನಂ | ಉತ್ತರ ಸರ್ವೆ ನಂ | ದಕ್ಷಿಣ ಸರ್ವೆ ನಂ. |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** |
| 1 | 119 | ಸರ್ಕಾರಿ ಖರಾಬು | ಸರ್ಕಾರಿ ಖರಾಬು | 142–31 | 142–31 | –– | –– | –– | ಗ್ರಾಮದ ಗಡಿ ಮತ್ತು 409 | ಬದನಗುಪ್ಪೆ ಗಡಿ ಮತ್ತು 483, 429 | ಬದಮಗುಪ್ಪೆ ಗಡಿ ಮತ್ತು ಚಿಕ್ಕಹೊಮ್ಮದ ಗಡಿ ಮತ್ತು 422, 423, 424 | 369, 372, 373, 419, 417 ಮತ್ತು 118 |
| **2** | 369 | ಡೇವಿಡ್ ರಾಜು,<br>ಮೋಹನ್ ಸುರೇಶ ಬಿನ್ ಚಂದ್ರಕುಮಾರ್,<br>ರಾಜಣ್ಣ ಬಿನ್ ಗುರುಸಿದ್ದಯ್ಯ,<br>ಶಾಡ್ರಾಕ್ ಬಿನ್ ಚಂದ್ರಕುಮಾರ್ | ಡೇವಿಡ್ ರಾಜು<br>ಮೋಹನ್ ಸುರೇಶ<br>ರಾಜಣ್ಣ<br>ಶಾಡ್ರಾಕ್ | 6–32 | 0–02 | 2–10<br>1–05<br>2–10<br>1–05 | ಖುಷ್ಕಿ | 7–70 | 368 | 327 | 119 | 370 |

| ಕ್ರ. ಸಂ. | ಸರ್ವೆ ನಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ವಿಸ್ತೀರ್ಣ | | | ತರಹೆ | ಆಕಾರ | ಚಕ್ಕುಬಂದಿ | | | |
|---|---|---|---|---|---|---|---|---|---|---|---|---|
| | | | | ಐನ್ ಎ–ಗು | ಖರಾಬು ಎ–ಗು | ಬಾಕಿ ಎ–ಗು | | | ಪೂರ್ವ ಸರ್ವೆ ನಂ. | ಪಶ್ಚಿಮ ಸರ್ವೆನಂ | ಉತ್ತರ ಸರ್ವೆ ನಂ | ದಕ್ಷಿಣ ಸರ್ವೆ ನಂ. |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** |
| 3 | 370/1 | ಆನಂದರಾಜು ಬಿನ್ ಸತ್ಯ ಶಾಂತಪ್ಪ, ಶ್ಯಾ ಸುಬ್ರಹ್ಮಣಯ್ಯ ಬಿನ್ ಹನುಮಂತಯ್ಯ | ಆನಂದರಾಜು<br>ಶ್ಯಾ ಸುಬ್ರಹ್ಮಣ್ಣಯ್ಯ | 3–12 | –– | 1–23<br>1–29 | ಖುಷ್ಕಿ | 3–34 | 367, ಗಾಡಿ ಹಾದಿ | 371 | 369 | 44, 43 |
| 4 | 370/2 | ಶ್ಯಾ ಸುಬ್ರಹ್ಮಣಯ್ಯ ಬಿನ್ ಹನುಮಂತಯ್ಯ | – | 2–11 | –– | 2–11 | ಖುಷ್ಕಿ | 2–20 | | | | |
| 5 | 372 | ಪುಟ್ಟಲಕ್ಷ್ಮಮ್ಮ ಕೋಂ ಮಹದೇವನಾಯ್ಕ, ಮಹದೇವಪ್ಪ ಬಿನ್ ಶಿವಬಸಪ್ಪ | ಪುಟ್ಟಲಕ್ಷ್ಮಮ್ಮ<br>ಮಹದೇವಪ್ಪ | 6–02 | 0–04 | 2–39<br>2–39 | ಖುಷ್ಕಿ | 6–01 | 369 | 373 | 119 | 371 |
| 6 | 373 | ಹೆಚ್.ರಾಮಚಂದ್ರನಾಯ್ಕ ಬಿನ್ ಹನುಮಂತನಾಯ್ಕ ತಾಯಮ್ಮ ಕೋಂ ಕೆಂಪಣ್ಣ | ಹೆಚ್.ರಾಮಚಂದ್ರನಾಯ್ಕ<br>ತಾಯಮ್ಮ | 6–20 | –– | 1–25<br>4–35 | ಖುಷ್ಕಿ | 5–66 | 372 | 419 | 119 | 374 |
| 7 | 419 | ಮಹದೇವಪ್ಪ ಬಿನ್ ಶಿವಬಸಪ್ಪ, ಮಹದೇವಮ್ಮ ಕೋಂ ರಾಮನಾಯ್ಕ | ಮಹದೇವಪ್ಪ,<br>ಮಹದೇವಮ್ಮ | 4–00 | –– | 2–00<br>2–00 | ಖುಷ್ಕಿ | 3–24 | 373 | 417 | 119 | 417, 418 |
| 8 | 420 | ಬೀಳು | ಬೀಳು | 5–01 | 0–01 | 5–00 | ಖುಷ್ಕಿ | 3–05 | 119 | 119 | 421 | 119 |
| 9 | 421 | ಬೀಳು | ಬೀಳು | 5–02 | –– | 5–02 | ಖುಷ್ಕಿ | 3–09 | 119 | 119 | 119 | 420 |
| 10 | 422 | ಎಂ.ನಾಗಪುಷ್ಪ ಕೋಂ ಎಂ.ಎನ್.ಉಮೇಶ್ | ಎಂ.ನಾಗಪುಷ್ಪ | 5–00 | 0–04 | 4–36 | ಖುಷ್ಕಿ | 3–63 | 423 | 119 | 427 | 119 |
| 11 | 423 | ಎಂ.ನಾಗಪುಷ್ಪ ಕೋಂ ಎಂ.ಎನ್.ಉಮೇಶ್ | ಎಂ.ನಾಗಪುಷ್ಪ | 5–00 | 0–29 | 4–11 | ಖುಷ್ಕಿ | 2–61 | 424 | 422 | 426 | 119 |
| 12 | 424 | ಎಂ.ನಾಗಪುಷ್ಪ ಕೋಂ ಎಂ.ಎನ್.ಉಮೇಶ್ | ಎಂ.ನಾಗಪುಷ್ಪ | 5–00 | 0–07 | 4–33 | ಖುಷ್ಕಿ | 2–95 | 119 | 423 | 425 | 119 ಸ. ಕಟ್ಟೆ |
| 13 | 425 | ಎಂ.ನಾಗಪುಷ್ಪ ಕೋಂ ಎಂ.ಎನ್.ಉಮೇಶ್ | ಎಂ.ನಾಗಪುಷ್ಪ | 5–00 | 0–09 | 4–31 | ಖುಷ್ಕಿ | 2–92 | 119 | 426 | ಚಿಕ್ಕ ಹೊಮ್ಮದ ಗಡಿ | 424 |

| ಕ್ರ. ಸಂ. | ಸರ್ವೆ ನಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ವಿಸ್ತೀರ್ಣ | | | ತರಹೆ | ಆಕಾರ | ಚಕ್ಕುಬಂದಿ | | | |
|---|---|---|---|---|---|---|---|---|---|---|---|---|
| | | | | ಐನ್ ಎ–ಗು | ಖರಾಬು ಎ–ಗು | ಬಾಕಿ ಎ–ಗು | | | ಪೂರ್ವ ಸರ್ವೆ ನಂ. | ಪಶ್ಚಿಮ ಸರ್ವೆನಂ | ಉತ್ತರ ಸರ್ವೆ ನಂ | ದಕ್ಷಿಣ ಸರ್ವೆ ನಂ. |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** |
| 14 | 426 | ಮಾಧುರಾವ್ ಬಿನ್ ಸುಬ್ರಹ್ಮಣ್ಯಯ್ಯ | ಮಾಧುರಾವ್ | 5–00 | 1–00 | 4–00 | ಖುಷ್ಕಿ | 2–44 | 425 | 427 | ಚಿಕ್ಕ ಹೊಮ್ಮದ ಗಡಿ | 423 |
| 15 | 427 | ಎಂ.ನಾಗಪುಷ್ಪ ಕೋಂ ಎಂ.ಎನ್.ಉಮೇಶ್ | ಎಂ.ನಾಗಪುಷ್ಪ | 5–00 | 0–05 | 4–35 | ಖುಷ್ಕಿ | 4–61 | 426 | 119 | ಚಿಕ್ಕ ಹೊಮ್ಮದ ಗಡಿ | 422 |
| 16 | 428 | ಗೌರಮ್ಮ ಕೋಂ ಪುಟ್ಟಮಾದಯ್ಯ, ಶಾಂತಕುಮಾರಿ ಕೋಂ d/o ಮಾದಯ್ಯ | ಗೌರಮ್ಮ, ಶಾಂತಕುಮಾರಿ | 4–08 | 0–07 | 2–00 2–01 | ಖುಷ್ಕಿ | 3–27 | 429 | ಬದನಗುಪ್ಪೆ ಗಡಿ | 119 | 430 |
| 17 | 429 | ಮುದ್ದುಮಾದಯ್ಯ ಬಿನ್ ಲೇಟ್ ದುಂಡಯ್ಯ, ಮಹದೇವಯ್ಯ ಬಿನ್ ಲೇಟ್ ದುಂಡಯ್ಯ | ಮುದ್ದುಮಾದಯ್ಯ ಮಹದೇವಯ್ಯ | 4–08 | 0–10 | 1–39 1–39 | ಖುಷ್ಕಿ | 3–20 | 119 | 428 | 119 | 118 |
| 18 | 483 | ಕಾಳನಾಯ್ಕ ಬಿನ್ ಮಾದನಾಯ್ಕ | ಕಾಳನಾಯ್ಕ | 4–20 | – | 4–20 | ಖುಷ್ಕಿ | 4–23 | 119 | ಬದನಗುಪ್ಪೆ ಗಡಿ | 119 | 119 |
| 19 | 487 | ಪಾರ್ವತಮ್ಮ ಕೋಂ ಲೇಟ್ ದೊಡ್ಡಯ್ಯ | ಪಾರ್ವತಮ್ಮ | 4–00 | 0–04 | 3–36 | ಖುಷ್ಕಿ | 4–46 | 488 | 119 | 119 | 119 |
| 20 | 488 | ಶಿವಕಮಲ ಕೋಂ ದೊಡ್ಡಯ್ಯ | ಶಿವಕಮಲ | 4–00 | 0–03 | 3–37 | ಖುಷ್ಕಿ | 4–46 | 119 | 487 | 119 | 119 |
| | | **ಒಟ್ಟು** | | **232–27** | **145–36** | **86–31** | | | | | | |

**ಫೋಪ್ಪಾರೆ**

| ಗ್ರಾಮ | ಐನ್ | ಖರಾಬು | ಬಾಕಿ |
|---|---|---|---|
| **ಕೆಲ್ಲಂಬಳ್ಳಿ** | **232–27** | **145–36** | **86–31** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಶನಿವಾರ, ಫೆಬ್ರವರಿ ೨೨, ೨೦೧೪ (ಫಾಲ್ಗುಣ ೩, ಶಕ ವರ್ಷ ೧೯೩೫) | ನಂ. ೧೪೧ |
|---|---|---|
| Part – III | Bangalore, Saturday, February 22, 2014 (Phalguna 3, Shaka Varsha 1935) | No. 141 |


## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಕರಡು ಅಧಿಸೂಚನೆ

**SMGDC.DUDC/CR(3)/MIS-044/13-14 (4307/13-14), ದಿನಾಂಕ: 21–02–2014**

ಕರ್ನಾಟಕ ಪುರಸಭೆ ಕಾಯ್ದೆ 1964 ರ ಪ್ರಕರಣ 352(2) ರ ಅವಕಾಶದಡಿ ಅಧಿಸೂಚನೆ ಸಂಖ್ಯೆ ಯುಡಿಡಿ 04 ಎಂಎಲ್‌ಆರ್ 2014 ದಿನಾಂಕ: 15.02.2014 ರನ್ವಯ ರಾಜ್ಯ ಸರ್ಕಾರವು ನನಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ವಿಪುಲ್ ಬನ್ಸಲ್, ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ ಆದ ನಾನು, ಶಿವಮೊಗ್ಗ ಜಿಲ್ಲೆಯ ಜೋಗ್–ಕಾರ್ಗಲ್ ಪಟ್ಟಣ ಪಂಚಾಯಿತಿಯ ವಾರ್ಡ್ ವಿಂಗಡಣೆಯ ಸಂಬಂಧ ಕರಡು ಅಧಿಸೂಚನೆಯನ್ನು ಈ ಮೂಲಕ ಪ್ರಚುರಪಡಿಸಿ ಬಾದಿತರಾಗಬಹುದಾದ ಸಾರ್ವಜನಿಕರಿಂದ ಆಕ್ಷೇಪಣೆ/ಸಲಹೆಗಳನ್ನು ಆಹ್ವಾನಿಸಲಾಗಿದೆ.

ಈ ಕುರಿತು ಆಕ್ಷೇಪಣೆ/ ಸಲಹೆಗಳನ್ನು ಈ ಕರಡು ಅಧಿಸೂಚನೆಯನ್ನು ಅಧಿಕೃತವಾಗಿ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಕಛೇರಿ ವೇಳೆಯಲ್ಲಿ ಅಂದರೆ ಬೆಳಿಗ್ಗೆ 10.30 ರಿಂದ ಸಂಜೆ 5.30 ರೊಳಗೆ ಜಿಲ್ಲಾದಿಕಾರಿಗಳ ಕಛೇರಿಯ ಜಿಲ್ಲಾನಗರಾಭಿವೃದ್ಧಿಕೋಶಕ್ಕೆ ಲಿಖಿತವಾಗಿ ಪೂರಕ ಮಾಹಿತಿಗಳೊಂದಿಗೆ ಸಲ್ಲಿಸುವುದು.

**ಜೋಗ್–ಕಾರ್ಗಲ್ ಪಟ್ಟಣ ಪಂಚಾಯಿತಿಯ ವಾರ್ಡ್‌ಗಳನ್ನು ಈ ಕೆಳಕಂಡಂತೆ ನಿಗಧಿಪಡಿಸಿದೆ.**

**1)** ಜೋಗ್–ಕಾರ್ಗಲ್ ಪಟ್ಟಣ ಪಂಚಾಯಿತಿಯನ್ನು 2011 ರ ಜನಗಣತಿಯ ಆಧಾರದ ಮೇಲೆ 11 (ಹನ್ನೊಂದು) ಏಕ ಸದಸ್ಯ ವಾರ್ಡ್‌ಗಳನ್ನಾಗಿ ನಿಗಧಿಪಡಿಸಲು ಉದ್ದೇಶಿಸಿದೆ.

**2)** ಲಗತ್ತಿಸಿದ ಅನುಬಂಧದ 2ನೇ ಕಾಲಂನಲ್ಲಿ ವಾರ್ಡಿನ ಸಂಖ್ಯೆ ಮತ್ತು ಹೆಸರನ್ನು 3ನೇ ಕಾಲಂನಲ್ಲಿ ಸಂಬಂಧಿಸಿದ ವಾರ್ಡಿನ ಚಕ್ಕುಬಂದಿ ಮತ್ತು ವ್ಯಾಪ್ತಿಗೆ ಒಳಪಟ್ಟಿರುವ ಪ್ರದೇಶಗಳನ್ನೂ ಬೌಂಡರಿಯನ್ನು ತೋರಿಸಿದೆ.

**ವಿಪುಲ್ ಬನ್ಸ್‌ಲ್ ಭಾ.ಆ.ಸೇ**
ಜಿಲ್ಲಾಧಿಕಾರಿ
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

## OFFICE OF THE DEPUTY COMMISSIONER, SHIMOGA DISTRICT, SHIMOGA.

### DRAFT NOTIFICATION

**SMGDC.DUDC/CR(3)/MIS-044/13-14 (4307/13-14), Date: 21.02.2014**

In exercise of the power under section 352(2) of Karnataka Municipalities Act 1964, delegated by the State Government to the Deputy Commissioner vide Government Notification No. UDD 4 MLR 2014 dated: 15.02.2014, I, Vipul Bansal, Deputy Commissioner, Shimoga is hereby publishing the draft notification in respect of delimitation of wards of Joga-Kargal Town Panchayat for information of all persons likely to be affected by it.

Notice is hereby given that objections / suggestions may be filed along with the relevant documents, within fifteen days from the date of the publication of this notification in the Official Gazette, at the District Urban Development Cell, Deputy Commissioner`s Office, Shimoga during the office hours i.e.10.00 am to 5.30 pm.

The delimitation of wards of Joga-Kargal Town Panchayat is made as below:

1) The number of territorial wards into which the Town Panchayat Joga-Kargal is proposed to be divided based on 2011 population census, will be 11 (Eleven) single member territorial wards.

2) The name and number of the ward is indicated in column 2 of the enclosed Annexure and the area covered and boundaries of each ward are indicated in column 3.

**Vipul Bansal I.A.S.**
Deputy Commissioner
Shimoga District, SHIMOGA

**ಅನುಬಂಧ**

**ಪಟ್ಟಣ ಪಂಚಾಯಿತಿ ಜೋಗ-ಕಾರ್ಗಲ್**

**2011 ರ ಜನಗಣತಿ ಅನುಸರಿಸಿ ಪಟ್ಟಣ ಪಂಚಾಯಿತಿ ಜೋಗ್- ಕಾರ್ಗಲ್ ವಾರ್ಡ್‌ಗಳ ಕ್ಷೇತ್ರ ಪುನರ್ ವಿಂಗಡಣೆಯ ಕ್ಷೇತ್ರವಾರು ಚೆಕ್ ಬಂದಿ ಮತ್ತು ರನಿಂಗ್ ಬೌಂಡರಿ**

| ಕ್ರ.ಸಂ. | ವಾರ್ಡ್ ನಂಬರ್ ಮತ್ತು ಹೆಸರು | ಚೆಕ್ ಬಂದಿ (ಮೇರೆ ಗುರುತು) | ವಾರ್ಡ್ ರನ್ನಿಂಗ್ ಬೌಂಡರಿ |
|---|---|---|---|
| 1 | ಜೋಗ್-ಕಾರ್ಗಲ್-1 | ಉತ್ತರ: ಶರಾವತಿ ನದಿ ದಂಡೆ ಮತ್ತು ವಾರ್ಡ ನಂ.02 ರ ಗಡಿ<br>ದಕ್ಷಿಣ: ಕರುಮನೆ ಗ್ರಾಮ ಮತ್ತು ಲಿಂಗನಮಕ್ಕಿ ಗ್ರಾಮದ ಗಡಿ<br>ಪೂರ್ವ: ಶರಾವತಿ ನದಿಯ ದಂಡೆ ಲಿಂಗನಮಕ್ಕಿ ಅಣೆಕಟ್ಟು ಮತ್ತು ಹೆಬ್ಬೈಲು ಗ್ರಾಮ (ಇಡುವಾಣಿ) ದ ಗಡಿ<br>ಪಶ್ಚಿಮ: ಕರುಮನೆ ಗ್ರಾಮ (ಕಾಳಮಂಜಿ)ದ ಮತ್ತು ವಾರ್ಡ ನಂ.02ರ ಗಡಿ | ಲಿಂಗನಮಕ್ಕಿ ಗ್ರಾಮದ ಲಿಂಗನ ಮಕ್ಕಿ ಅಣೆಕಟ್ಟಿನ ಕ್ರಸ್ಟ್ ಗೇಟ್ ನಿಂದ ಆರಂಭವಾಗಿ ವಾಯುವ್ಯ ಮುಖವಾಗಿ ಶರಾವತಿ ನದಿಯ ಅಂಚಿನ ಉದ್ದಕ್ಕೂ ಸಾಗಿ ಎಡಭಾಗದ (ದಕ್ಷಿಣ) ಪ್ರದೇಶವನ್ನು ಒಳಗೊಂಡ ಚೈನಾಗೇಟ್ ನಿಂದ ಪಶ್ಚಿಮಕ್ಕೆ ತಿರುಗಿ ಬೈಪಾಸ್ ರಸ್ತೆಯ ವೃತ್ತದಲ್ಲಿ ದಕ್ಷಿಣಕ್ಕೆ ತಿರುಗಿ ಸಾಗರದಿಂದ ಕಾರ್ಗಲ್ ಗೆ ಬರುವ ಮುಖ್ಯರಸ್ತೆಯ ಮೂಲಕ ನೈರುತ್ಯಕ್ಕೆ ಸಾಗಿ ಚೌಡೇಶ್ವರಿ ವೃತ್ತದ ಮೂಲಕ ಎಡಭಾಗದ ಪ್ರದೇಶವನ್ನು ಒಳಗೊಂಡು ಬಟ್ಕಳ್ ವೃತ್ತಕ್ಕೆ ಸೇರಿ ದಕ್ಷಿಣಾಭಿಮುಖವಾಗಿ ಚಲಿಸಿ ಪವರ್ ಚಾನಲ್ ಒಳಗೊಂಡಂತೆ ಮೂಲೆ ಮನೆ ವೃತ್ತದ ಕರುಮನೆ ಮತ್ತು ಬಿದೂರೂರು ಗಡಿಯಚ್ಚಿನಲ್ಲಿ ಪೂರ್ವಾಭಿಮುಖವಾಗಿ ಚಲಿಸಿ ಎಡಭಾಗದ ಕುಳಕಾರು ಮತ್ತು ಮಳಲಿ ಪ್ರದೇಶ ಒಳಗೊಂಡಂತೆ ಲಿಂಗನಮಕ್ಕಿ ಗ್ರಾಮದ ಸ.ನಂ.73 ಪೂರ್ವದ ಅಂಚಿನ ಮೂಲಕ ಲಿಂಗನ ಮಕ್ಕಿ ವಿದ್ಯುದಾಗಾರ ಬಳಸಿಕೊಂಡ ಲಿಂಗನಮಕ್ಕಿ ಅಣೆಕಟ್ಟಿನ ಆಗ್ನೇಯ ತುದಿಗೆ ಬಂದು ನಂತರ ಈಶಾನ್ಯಾಭಿಮುಖವಾಗಿ ಚಲಿಸಿ, ಅಣೆಕಟ್ಟಿನ ಕ್ರೇಸ್ಟ್ ಗೇಟ್ ತಲುಪುತ್ತದೆ. |
| 2 | ಜೋಗ್-ಕಾರ್ಗಲ್-2 | ಉತ್ತರ: ಕಾರ್ಗಲ್ ಮಸೀದಿ ರಸ್ತೆ ಮತ್ತು ವಾರ್ಡ ನಂ.03ರ ಗಡಿ<br>ದಕ್ಷಿಣ: ಸಾಗರದಿಂದ ಕಾರ್ಗಲ್ ಗೆ ಬರುವ ಮುಖ್ಯ ರಸ್ತೆ ಮತ್ತು ಬಿದರೂರು ಗಡಿ<br>ಪೂರ್ವ: ಶರಾವತಿ ನದಿ ಮತ್ತು ವಾರ್ಡ ನಂ.01 ರ ಗಡಿ<br>ಪಶ್ಚಿಮ: ಬಿದರೂರು ಗ್ರಾಮದ ಗಡಿ | ಚೈನಾ ಗೇಟ್ ಸಾಗರ ಕಾರ್ಗಲ್ ಬೈಪಾಸ್ ರಸ್ತೆಯ ಜಂಕ್ಷನ್ ನಿಂದ ಆರಂಭಗೊಂಡು ವಾಯುವ್ಯಾಭಿಮುಖವಾಗಿ ತಿರುಗಿ ಬೈಪಾಸ್ ರಸ್ತೆಯ ಬಳಿ ದಕ್ಷಿಣಾಭಿಮುಖವಾಗಿ ಚಲಿಸಿ ಎಡಭಾಗದ ಪ್ರದೇಶವನ್ನೊಳಗೊಂಡು, ಮಸೀದಿ ವೃತ್ತದಲ್ಲಿ ಎಸ್ ಹೆಚ್ 50 ಯನ್ನು ಸೇರಿ ಅನಂತರ ಬಿ.ಹೆಚ್ ರಸ್ತೆ 50 ರ ಮಸೀದಿ ವೃತ್ತದಿಂದ ದಕ್ಷಿಣಾಭಿಮುಖವಾಗಿ ಎಸ್ ಹೆಚ್ 50 ರ ಮುಖಾಂತರ ಚಲಿಸಿ ಅಯ್ಯಪ್ಪ ಸ್ವಾಮಿ ವೃತ್ತದಲ್ಲಿ ಹಿರಿಯ ಪ್ರಾಥಮಿಕ ಶಾಲೆಯ ಪಕ್ಕದ ರಸ್ತೆಯಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸಿ ಅನಂತರ ಶಾಲೆಯ ಹಿಂಭಾಗದಲ್ಲಿ ಉತ್ತರಾಭಿಮುಖವಾಗಿ ಚಲಿಸಿ ಅನಂತರ ಪಶ್ಚಿಮಾಭಿಮುಖವಾಗಿ ಚಲಿಸಿ ಕೆಪಿಸಿ ಕಾಲೋನಿ ರಸ್ತೆಯಲ್ಲಿ ಎಡಭಾಗದ ಕೆಪಿಸಿ ಕಾಲೋನಿ ಒಳಗೊಂಡು ಪುರ ಪಂಚಾಯಿತಿ ಗಡಿವರೆಗೂ ತಲುಪಿ ಅನಂತರ ಆಗ್ನೇಯಾಭಿಮುಖವಾಗಿ ಪಟ್ಟಣ ಪಂಚಾಯಿತಿ ಗಡಿ ಗುಂಟ ಚಲಿಸಿ ಎಡಭಾಗದ ಶಾಂತಿನಗರ ಕೆಪಿಸಿ ಐಬಿ ಪ್ರದೇಶ, ಮತ್ತು ಬಿದರೂರುವನ್ನೊಳಗೊಂಡು ಮೂಲೆ ಮನೆ ವೃತ್ತದ ಜಂಕ್ಷನ್‌ನಲ್ಲಿ ಎಸ್ ಹೆಚ್ 50 ತಲುಪಿ ಅನಂತರ ಉತ್ತರಾಭಿಮುಖವಾಗಿ ಎಸ್‌ಹೆಚ್ 50 ರ ಮೂಲಕ ಲಿಂಗನಮಕ್ಕಿ ಕಾರ್ಗಲ್ ಭಟ್ಕಳ್ ವೃತ್ತದಲ್ಲಿ ಪೂರ್ವಾಭಿಮುಖವಾಗಿ ಕಾರ್ಗಲ್ ನಿಂದ ಸಾಗರಕ್ಕೆ ಹೋಗುವ ಪಟ್ಟಣ ಪಂಚಾಯಿತಿ ಎದುರು ಭಾಗದ ರಸ್ತೆ ಮುಖಾಂತರ ಎಡಭಾಗದ ಗ್ಯಾರೇಜ್ ಲೈನ್ ಎನ್ ಐತ್ ಒಳಗೊಂಡು, ಹಾಗೆಯೇ ಅದೇ ರಸ್ತೆಯ ಈಶಾನ್ಯಾಭಿಮುಖವಾಗಿ ಚಲಿಸಿ ಎಡಭಾಗದ ಕೆ ಎಆರ್ ಗುಡ್ಡದ ಬಿ ಸಿ ಎಂ ಹಾಸ್ಟೆಲ್ ಚೌಡೇಶ್ವರಿ ದೇವಸ್ಥಾನದ ಪ್ರದೇಶ ಒಳಗೊಂಡು ಚೈನಾಗೇಟ್ ಬೈಪಾಸ್ ವೃತ್ತ ತಲುಪಿ ನಂತರ ಉತ್ತರಾಭಿಮುಖವಾಗಿ ಕಾರ್ಗಲ್ ಬೈಪಾಸ್ ರಸ್ತೆಯಲ್ಲಿ ಚಲಿಸಿ ಎಡಭಾಗದ ಪ್ರದೇಶವನ್ನೊಳಗೊಂಡು ಆರಂಭ ಬಿಂದು ತಲುಪುತ್ತದೆ. |

| | | | |
|---|---|---|---|
| 3 | ಜೋಗ್–ಕಾರ್ಗಲ್–3 | ಉತ್ತರ: ಅಂಬೇಡ್ಕರ್ ಕಾಲೋನಿ ಗಡಿ<br>ದಕ್ಷಿಣ: ಕಾರ್ಗಲ್ ಬಜಾರ್ ರಸ್ತೆ ಮತ್ತು ಮಸೀದಿ ರಸ್ತೆ<br>ಪೂರ್ವ: ಮಸೀದಿ ರಸ್ತೆ ಮತ್ತು ವಾರ್ಡ ನಂ.02 ರ ಗಡಿ<br>ಪಶ್ಚಿಮ: ಕಾರ್ಗಲ್ ಬಜಾರ್ ನಿಂದ ಮಾರಿಕಾಂಬಾ ರಸ್ತೆಯ ಗಡಿ ಮತ್ತು ವಾರ್ಡ ನಂ.05 ರ ಗಡಿ | ಕಾರ್ಗಲ್ ಮಸೀದಿಯಿಂದ ಆರಂಭಗೊಂಡು, ಪಶ್ಚಿಮಾಭಿಮುಖವಾಗಿ ಮಸೀದಿ ರಸ್ತೆಯಲ್ಲಿ ಚಲಿಸಿ ಅಂಬೇಡ್ಕರ್ ಕಾಲೋನಿ ಪ್ರದೇಶಗಳನ್ನೊಳಗೊಂಡು, ಮಾರಿಕಾಂಬ ರಸ್ತೆಯ ಮುಖಾಂತರ ದಕ್ಷಿಣಾಭಿಮುಖವಾಗಿ ಚಲಿಸಿ ಎಡಭಾಗದ ಪ್ರದೇಶಗಳನ್ನು ಒಳಗೊಂಡು, ಎಸ್ ಹೆಚ್ 50 ನ್ನು ಪೋಲೀಸ್ ಸ್ಟೇಶನ್ ವೃತ್ತದಲ್ಲಿ ಸೇರಿ ಅನಂತರ ಎಸ್ ಹೆಚ್ 50 ರಲ್ಲಿ ಆಗ್ನೇಯಾಭಿಮುಖವಾಗಿ ಚಲಿಸಿ ಮಸೀದಿ ಎಸ್ ಹೆಚ್ 50 ರ ಮಸೀದಿ ವೃತ್ತದಲ್ಲಿ ಈಶಾನ್ಯಾಭಿಮುಖವಾಗಿ ಮಸೀದಿ ರಸ್ತೆಯ ಮುಖಾಂತರ ಚಲಿಸಿ ಎಡಭಾಗದ ಟ್ಯಾಂಕ್ ಏರಿಯಾ ಬೆಟ್ಟಲು ಪ್ರದೇಶಗಳನ್ನೊಳಗೊಂಡು, ಮಸೀದಿ ರಸ್ತೆಯ ಎಡಭಾಗದ ಪ್ರದೇಶಗಳನ್ನೊಳಗೊಂಡು ಆರಂಭದ ಬಿಂದು ತಲುಪುತ್ತದೆ. |
| 4 | ಜೋಗ್–ಕಾರ್ಗಲ್–4 | ಉತ್ತರ: ಕಾರ್ಗಲ್ ಬಜಾರ್ ರಸ್ತೆಯಿಂದ ಕಾಂಟ್ರ್ಯಾಕ್ಟರ್ ಕಾಲೋನಿಗೆ ಹೋಗುವ ರಸ್ತೆ ಮತ್ತು ರಷ್ಯನ್ ಕಾಲೋನಿ ಡಿಷ್ ರೂಂ ಗಡಿ<br>ದಕ್ಷಿಣ: ಕಾರ್ಗಲ್ ಹಿರಿಯ ಪ್ರಾಥಮಿಕ ಶಾಲೆ (ಅಯ್ಯಪ್ಪ ಸ್ವಾಮಿ ದೇವಸ್ಥಾನ ರಸ್ತೆ)<br>ಪೂರ್ವ: ಬಜಾರ್ ರಸ್ತೆ ಕಾರ್ಗಲ್ ಗಣಪತಿ ದೇವಸ್ಥಾನದಿಂದ ಹಾದು ಹೋಗುವ ಮುಖ್ಯ ರಸ್ತೆ<br>ಪಶ್ಚಿಮ: ಕಾರ್ಗಲ್ ನ ಪ್ಯಾಡಿ ಫೀಲ್ಡ್ ಮತ್ತು ವಾರ್ಡ ನಂ.02 ರ ಗಡಿ | ಎಸ್ ಹೆಚ್ 50 ರಿಂದ ಕಾಂಟ್ರ್ಯಾಕ್ಟರ್ ಕಾಲೋನಿಗೆ ಹೋಗುವ ಜಂಕ್ಷನ್ ನಿಂದ ಆರಂಭಿಸಿ ಪಶ್ಚಿಮಾಭಿಮುಖವಾಗಿ ಕಾಂಟ್ರ್ಯಾಕ್ಟರ್ ಕಾಲೋನಿ ರಸ್ತೆಯಲ್ಲಿ ಚಲಿಸಿ, ಕಾಂಟ್ರ್ಯಾಕ್ಟರ್ ಕಾಲೋನಿ ಎಡಭಾಗದ ಪ್ರದೇಶವನ್ನೊಳಗೊಂಡು , ರಷ್ಯನ್ ಕಾಲೋನಿ ಪ್ರದೇಶವನ್ನೊಳಗೊಂಡು, ರಷ್ಯನ್ ಕಾಲೋನಿಯಿಂದ ಚರ್ಚ ರಸ್ತೆ ಎಡಭಾಗದ ಪ್ರದೇಶವನ್ನೊಳಗೊಂಡು, ಚರ್ಚ ರಸ್ತೆಯಿಂದ ಟ್ಯಾಂಕ್ ರಸ್ತೆಗೆ ಹೋಗುವ ಎಡಭಾಗದ ಪ್ರದೇಶವನ್ನೊಳಗೊಂಡು ವಾಟರ್ ಟ್ಯಾಂಕ್ ಗಡಿಯವರೆಗೆ ಚಲಿಸಿ ಭಾಗ್ಯ ಮಂದಿನ ಪ್ರದೇಶವನ್ನೊಳಗೊಂಡು ಪಟ್ಟಣ ಪಂಚಾಯಿತಿ ಗಡಿ ತಲುಪಿ ಆಗ್ನೇಯಾಭಿಮುಖವಾಗಿ ಚಲಿಸಿ ಪಟ್ಟಣ ಪಂಚಾಯಿತಿಯ ಗಡಿ ಗುಂಟ ಎಡಭಾಗದ ಪ್ಯಾಡಿ ಫೀಲ್ಡ್ ಮತ್ತು ಚೌವಾಲಿ ಕ್ಯಾಂಪ್ ಒಳಗೊಂಡು, ನಂತರ ಕೆಪಿಸಿ ಕಾಲೋನಿಯ ಸಿ ಟೈಪ್ ವಸತಿ ಗೃಹ ರಸ್ತೆಯಲ್ಲಿ ಪೂರ್ವಾಭಿಮುಖವಾಗಿ ಚಲಿಸಿ ಎಡಭಾಗದ ಕೆ ಪಿ ಸಿ ಸಿ ಟೈಪ್ ವಸತಿ ಗೃಹ ಒಳಗೊಂಡು ಮುಂದುವರೆದು ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಯ ಬಳಿ ದಕ್ಷಿಣಾಭಿಮುಖವಾಗಿ ತಿರುಗಿ ಎಡಭಾಗದ (ಗಣಪತಿ ದೇವಸ್ಥಾನದ ಅಯ್ಯಪ್ಪ ದೇವಸ್ಥಾನದ ಪ್ರದೇಶವನ್ನೊಳಗೊಂಡು, ಪೂರ್ವಾಭಿಮುಖವಾಗಿ ಚಲಿಸಿ ಎಸ್ ಹೆಚ್ 50 ಸೇರಿ ನಂತರ ಉತ್ತರಾಭಿಮುಖವಾಗಿ ತಿರುಗಿ ಎಸ್ ಹೆಚ್ 50 ರ ಎಡಭಾಗದ ಪ್ರದೇಶವನ್ನೊಳಗೊಂಡು, ತದನಂತರ ಅದೇ ರಸ್ತೆಯ ಮೂಲಕ ಮಸೀದಿ ವೃತ್ತದಲ್ಲಿ ವಾಯುವ್ಯಕ್ಕೆ ತಿರುಗಿ ಹಾಗೆಯೇ ಮುಂದೆ ಚಲಿಸಿ ಕಾರ್ಗಲ್ ಬಜಾರ್ ಎಡಭಾಗದ ಪ್ರದೇಶವನ್ನೊಳಗೊಂಡು, ಮೂಲ ಬಿಂದುವನ್ನು ಸೇರುತ್ತದೆ. |
| 05 | ಜೋಗ ಕಾರ್ಗಲ್ –5 | ಉತ್ತರ : ಸಾಗರದಿಂದ ಕಾರ್ಗಲ್ ಗೆ ಬರುವ ಬೈಪಾಸ್ ರಸ್ತೆ ಮತ್ತು ತಲಕಳಲೆ ಅರಳೀಕಟ್ಟೆ ರಸ್ತೆ<br>ದಕ್ಷಿಣ: ಕಂಟ್ರ್ಯಾಕ್ಟರ್ ಕಾಲೋನಿ ರಸ್ತೆಯಿಂದ ಭಾಗ್ಯಮಂದಿರ ಕಾಲೋನಿ<br>ಪೂರ್ವ: ಮಾರಿಕಾಂಭ ರಸ್ತೆ ಮತ್ತು ವಾರ್ಡು ನಂ 03 ಗಡಿ<br>ಪಶ್ಚಿಮ : ಎಲ್ಲಮ್ಮ ಗುಡ್ಡದ ಗಡಿಭಾಗ ಮತ್ತು ಸ ನಂ.63 ಗಡಿ | ಸಾಗರ ಕಾರ್ಗಲ್ ಬೈಪಾಸ್ ರಸ್ತೆಯ ಮಹಾವೀರ ವೃತ್ತದ ಹತ್ತಿರದ ಮುಂದಿನ ಸ್ಮಶಾನದ ರಸ್ತೆಗೆ ತಿರುಗುವ ರಸ್ತೆಯ ಜಂಕ್ಷನ್ ನಿಂದ ಆರಂಭಗೊಂಡು, ಪಶ್ಚಿಮಾಭಿಮುಖವಾಗಿ ಬೈಪಾಸ್ ರಸ್ತೆ ಮುಖಾಂತರ ಚಲಿಸಿ ಆಸ್ಪತ್ರೆ ಎದುರಿನ ಎಸ್ ಹೆಚ್ 50 ರ ಜಂಕ್ಷನ್ ನಲ್ಲಿ ನೈರುತ್ಯಕ್ಕೆ ತಿರುಗಿ ಎಸ್ ಹೆಚ್ 50 ರ ಮೂಲಕ ಎಡಭಾಗದ ಸ್ಮಶಾನ ಪ್ರದೇಶವನ್ನೊಳಗೊಂಡು, ತಲಕಳೆಲೆ ವೃತ್ತ ತಲುಪಿ ನಂತರ ತಲಕಳೆಲೆ ರಸ್ತೆ ಮೂಲಕ ಪಶ್ಚಿಮಾಭಿಮುಖವಾಗಿ ಪಟ್ಟಣ ಪಂಚಾಯಿತಿ ಮಲ್ಕಿ ಗಡಿವರೆಗೂ ಚಲಿಸಿ ಅನಂತರ ದಕ್ಷಿಣಾಮಾಭಿಮುಖವಾಗಿ ಪಟ್ಟಣ ಪಂಚಾಯಿತಿ ಗಡಿವರೆಗೂ ಚಲಿಸಿ ಅನಂತರ ಪೂರ್ವಾಭಿಮುಖವಾಗಿ ಪಟ್ಟಣ ಪಂಚಾಯಿತಿ ಗಡಿ ಗುಂಟ ಚಲಿಸಿ ಭಾಗ್ಯ ಮಂದಿರ ಏರಿಯಾ ಜಿ ಎಲ್ ಎಸ್ ವಾಟರ್ ಟ್ಯಾಂಕ್ ಸುತ್ತಲಿನ ಪ್ರದೇಶ ಒಳಗೊಂಡು ಪೂರ್ವಾಭಿಮುಖವಾಗಿ ಚಲಿಸಿ ಯಲ್ಲಮ್ಮ ಗುಡ್ಡದಿಂದ ಎಸ್ ಹೆಚ್ 50 ರ ಮೂಲಕ ಕಂಟ್ರ್ಯಾಕ್ಟರ್ ಕಾಲೋನಿ ರಸ್ತೆಯ ಮೂಲಕ ಚಲಿಸಿ ಎಡಭಾಗದ ಪ್ರದೇಶವನ್ನೊಳಗೊಂಡು, ಎಸ್ ಹೆಚ್ 50 ನ್ನು ತಲುಪಿ ಅನಂತರ ಅದೇ ರಸ್ತೆ ಮುಖಾಂತರ ಆಗ್ನೇಯಾಭಿಮುಖವಾಗಿ ಚಲಿಸಿ ಎಡಭಾಗದ 2 ನೇ ಬಜಾರ್ ಪ್ರದೇಶವನ್ನೊಳಗೊಂಡು, ಪೊಲೀಸ್ ಸ್ಟೇಶನ್ ವೃತ್ತದಲ್ಲಿ ದಕ್ಷಿಣಾಭಿಮುಖವಾಗಿ ಮಾರಿಕಾಂಭ ರಸ್ತೆಯ ಮೂಲಕ ಎಡಭಾಗದ ಪ್ರದೇಶವನ್ನೊಳಗೊಂಡ ಉತ್ತರಾಭಿಮುಖವಾಗಿ ಆರಂಭ ಬಿಂದು ತಲುಪುತ್ತದೆ. |
| 06 | ಜೋಗ ಕಾರ್ಗಲ್ –6 | ಉತ್ತರ : ಜೋಗ ಶಿರೂರು ಕೆರೆ ಪಂಪ್ ಹೌಸ್ ನಿಂದ ವರ್ಕಮನ್ ಬ್ಲಾಕ್ ಅರಳಿ ಮರದ ಗಡಿ | ಎಸ್ ಹೆಚ್ 50 ರ ತೂಗು ಸೇತುವವೆ ವೃತ್ತದಿಂದ ಆರಂಭವಾಗಿ ಪಶ್ಚಿಮಾಭಿಮುಖವಾಗಿ ಚಲಿಸಿ ವರ್ಕ ಮನ್ ಮನ್ ಬ್ಲಾಕ್ ರಸ್ತೆಯ ಮುಖಾಂತರ ಚಲಿಸಿ, ಎಡಭಾಗದ ಪ್ರದೇಶವನ್ನೊಳಗೊಂಡು, ಈಶ್ವರ ದೇವಸ್ಥಾನ |

| | | | |
|---|---|---|---|
| | | ದಕ್ಷಿಣ: ಕಾರ್ಗಲ್ ತಲಕಳಲೆ ವೃತ್ತದಿಂದ ತಲಕಳಲೆ ಡ್ಯಾಂ ಗೆ ಹೋಗುವ ಮುಖ್ಯರಸ್ತೆ<br>ಪೂರ್ವ: ತಲಕಳಲೆ ಸರ್ಕಲ್ ನಿಂದ ಜೋಗ ಫಾಲ್ಸ್ ಗೆ ಹೋಗುವ ಮುಖ್ಯರಸ್ತೆ ಶಿರೂರು ಕೆರೆ ಸರ್ಕಲ್<br>ಪಶ್ಚಿಮ : ದೇವರಮಕ್ಕಿ ಈಶ್ವರ ದೇವಸ್ಥಾನದ ಗಡಿ | ಪ್ರದೇಶವನ್ನೊಳಗೊಂಡು ವರ್ಕ ಮನ್ ಬ್ಲಾಕ್ ನ ರಸ್ತೆಯ ಮುಖಾಂತರ ಚಲಿಸಿ ವರ್ಕ ಮನ್ ಬ್ಲಾಕ್ ನ ಶಾಲಾ ಪ್ರದೇಶಗಳನ್ನು ಮತ್ತು ಆಶ್ರಮ ಕಾಲೋನಿ ಪ್ರದೇಶವನ್ನೊಳಗೊಂಡು ಹಾಗೇಯೇ ಮುಂದುವರೆದು ರೆಡ್ಡಿ ಬ್ಲಾಕ್ ಪ್ರದೇಶ ಹೊರತಾದ ತಗ್ಗು ಪ್ರದೇಶವನ್ನೊಳಗೊಂಡು ಜಿ ಟೈಪ್ ವಸತಿ ಸಮುಚ್ಚಯದ ಎದುರಿನ ಪ್ರದೇಶವನ್ನೊಳಗೊಂಡು , ದಕ್ಷಿಣಾಭಿಮುಖವಾಗಿ ಚಲಿಸಿ ಪಟ್ಟಣ ಪಂಚಾಯಿತಿ ಗಡಿ ಗುಂಟ ಚಲಿಸಿ ನಂತರ ಈಶಾನ್ಯಾಭಿಮುಖವಾಗಿ ಚಲಿಸಿ ಪಟ್ಟಣ ಪಂಚಾಯಿತಿ ಪ್ರದೇಶ ತಲಕಳಲೆ ಕಾರ್ಗಲ್ ರಸ್ತೆಯ ಮುಖಾಂತರ ಮಲ್ಲಕ್ಕಿ ಪ್ರದೇಶವನ್ನೊಳಗೊಂಡು, ಹರಿಗೆ ಗದ್ದೆ , ಶನಿ ಗದ್ದೆ, ದೇವರಮಕ್ಕಿ ಪ್ರದೇಶವನ್ನೊಳಗೊಂಡು, ಪೂರ್ವಾಭಿಮುಖವಾಗಿ ಚಲಿಸಿ ತಲಕಳಲೆ ವೃತ್ತ ತಲುಪಿ ಅನಂತರ ಈಶಾನ್ಯಾಭಿಮುಖವಾಗಿ ಎಸ್ ಹೆಚ್ 50 ರ ಮೂಲಕ ಚಲಿಸಿ ಪ್ರಾಥಮಿಕ ಆರೋಗ್ಯ ಕೇಂದ್ರ ಜಂಕ್ಷನ್ ಮೂಲಕ ಎಡಪ್ರದೇಶವನ್ನೊಳಗೊಂಡು, ಅದೇ ರಸ್ತೆಯ ಮೂಲಕ ಉತ್ತರಾಭಿಮುಖವಾಗಿ ಚಲಿಸಿ ಅರಣ್ಯ ಇಲಾಖೆ ಕಛೇರಿ ಚಪ್ಪಗಾರು ಸರ್ವೇ ನಂಬರ್ 1 ಸ್ಮಶಾನ ಸೇರಿಕೊಂಡು, ಶಿರೂರು ಕೆರೆ ವೃತ್ತ ಆರಂಭ ಬಿಂದು ತಲುಪುತ್ತದೆ. |
| 07 | ಜೋಗ ಕಾರ್ಗಲ್ –7 | ಉತ್ತರ : ಜೋಗ ಬಜಾರ್ ರಸ್ತೆ ಮತ್ತು ಗಾಂಧಿ ಪಾರ್ಕ ನಿಂದ ವರ್ಕ ಮನ್ ನಿಂದ ವರ್ಕ ಮನ್ ಬ್ಲಾಕ್ ಗೆ ಬರುವ ರಸ್ತೆ<br>ದಕ್ಷಿಣ: ಬೈಪಾಸ್ ರಸ್ತೆಯಿಂದ ಶಿರೂರುಕೆರೆ ಸರ್ಕಲ್ ಮತ್ತು ವರ್ಕಮನ್ ಬ್ಲಾಕ್ ನಿಂದ ಅರಳಿಮನೆ<br>ಪೂರ್ವ: ಶರಾವತಿ ನದಿ ದಂಡೆ<br>ಪಶ್ಚಿಮ : ಹೆಲ್ತ್ ಕ್ಯಾಂಪ್ ಮತ್ತು ಆಶ್ರಯ ಕಾಲೋನಿ ಗಡಿ | ಯೂತ್ ಹಾಸ್ಟೆಲ್ ವೃತ್ತದಿಂದ ಆರಂಭಗೊಂಡು ಪಶ್ಚಿಮಾಭಿಮುಖವಾಗಿ ಜೋಗ ಬಜಾರ್ ರಸ್ತೆಯ ಮುಖಾಂತರ ಪಶ್ಚಿಮಾಭಿಮುಖವಾಗಿ ಚಲಿಸಿ ಎಡಭಾಗದ ಮಲಬಾರ್ ಕ್ಯಾಂಪ್ ಮತ್ತು ಬಜಾರ್ ಎಡಭಾಗದ ಪ್ರದೇಶಗಳನ್ನು ಒಳಗೊಂಡು ಎಂ ಜಿ ಪಾರ್ಕ ವೃತ್ತದಲ್ಲಿ ದಕ್ಷಿಣಾಭಿಮುಖವಾಗಿ ಚಲಿಸಿ ರೆಡ್ಡಿ ಬ್ಲಾಕ್ ರಸ್ತೆ ಮುಖಾಂತರ ರೆಡ್ಡಿ ಬ್ಲಾಕ್ ಹೊರತು ಪಡಿಸಿದ ಪೂರ್ವಾಭಿಮುಖವಾಗಿ ಚಲಿಸಿ ವರ್ಕಮನ್ ಬ್ಲಾಕ್ ಅರಳಿಮರದ ವೃತ್ತದ ಹೆಲ್ತ್ ಕ್ಯಾಂಪ್ ಮತ್ತು ವರ್ಕಮನ್ ಬ್ಲಾಕ್ ಪಶ್ಚಿಮ ಏರಿಯಾ ಚಾಮುಂಡೇಶ್ವರಿ ದೇವಸ್ಥಾನದ ಪ್ರದೇಶವನ್ನೊಳಗೊಂಡು, ಪೂರ್ವಾಭಿಮುಖವಾಗಿ ಚಲಿಸಿ ಮುಂದುವರೆದು ವರ್ಕಮನ್ ರಸ್ತೆಯ ಮುಖಾಂತರ ಬ್ಯಾಲೆನ್ಸಿಂಗ್ ರಿಜರ್ವರ್ ತೂಗುಸೇತುವೆಯ ಪ್ರದೇಶವನ್ನೊಳಗೊಂಡು ಆನಂತರ ತೂಗು ಸೇತುವೆಯಿಂದ ದಕ್ಷಿಣಕ್ಕೆ ತಿರುಗಿ ಎಸ್ ಹೆಚ್ 50 ರ ಮೂಲಕ ಜೋಗ ನಿಂದ ಕಾರ್ಗಲ್ ಗೆ ಹೋಗುವ ರಸ್ತೆಯಲ್ಲಿ ಚಲಿಸಿ ನಂತರ ಆಸ್ಪತ್ರೆ ಎದುರಿನ ಬೈಪಾಸ್ ವೃತ್ತದ ಜಂಕ್ಷನ್ ಬಳಿ ಪೂರ್ವಕ್ಕೆ ತಿರುಗಿ ಕಾರ್ಗಲ್ ನಿಂದ ಸಾಗರಕ್ಕೆ ಹೋಗುವ ಬೈಪಾಸ್ ರಸ್ತೆ ಮುಖಾಂತರ ಹಾದು ಎಡಭಾಗದ ಜಾಲಿ ಗದ್ದೆ ಪ್ರದೇಶಗಳನ್ನು ಒಳಗೊಂಡು, ಅನಂತರ ಅದೇ ರಸ್ತೆಯ ಮುಖಾಂತರ ಆಗ್ನೇಯಾಭಿಮುಖವಾಗಿ ಚಲಿಸಿ ಚೈನಾ ಗೇಟ್ ಬಳಿಯ ಬೈಪಾಸ್ ವೃತ್ತದ ಮುಖಾಂತರ ಶರಾವತಿ ನದಿ ದಂಡಿ ತಲುಪಿ ಅನಂತರ ಉತ್ತರಾಭಿಮುಖವಾಗಿ ಶರಾವತಿ ನದಿಯ ದಂಡೆಯಂಚಿನಲ್ಲಿ ಚಲಿಸಿ ಎಡಬಾಗದ ಪ್ರದೇಶಗಳಾದ ಗೀಳಾಲ ಗಂಡಿ ಒಳಗೊಂಡು, ತೂಗು ಸೇತುವೆಗೆ ಸಮಾನಾಂತರ ದೂರಕ್ಕೆ ತಲುಪಿ ನಂತರ ಪಶ್ಚಮಾಭಿಮುಖವಾಗಿ ಚಲಿಸಿ ತೂಗು ಸೇತುವೆ ತಲುಪಿ ಅದರ ಮುಖಾಂತರ ಹಾದು ನಂತರ ಉತ್ತರಾಭಿಮುಖವಾಗಿ ರಾಜ್ಯ ಹೆದ್ದಾರಿ 50ರ ಮುಖಾಂತರ ಯೂತ್ ಹಾಸ್ಟೆಲ್ ವೃತ್ತದ ಆರಂಭಬಿಂದು ತಲುಪುತ್ತದೆ. |
| 8 | ಜೋಗ ಕಾರ್ಗಲ್ –8 | ಉತ್ತರ : ಜೋಗ ಫಾಲ್ಸ್ ನಿಂದ ಶರಾವತಿ ನದಿ ದಂಡೆ ಮತ್ತು ಸೀತಾ ಕಟ್ಟೆ ಸೇತುವೆಯಿಂದ ಎಂ ಜಿ ಹೆಚ್ ಪವರ್ ಸ್ಟೇಶನ್ ಗಡಿ<br>ದಕ್ಷಿಣ: ತೂಗು ಸೇತುವೆಯಿಂದ ಯೂತ್ ಹಾಸ್ಟೆಲ್ ಮತ್ತು ಬಜಾರ್ ರಸ್ತೆ ಹಾಗೂ ಜೋಗ್ ಫಾಲ್ಸ ನಿಂದ ಎಸ್ ವಿ ಪಿ ಹೋಗುವ ರಸ್ತೆ<br>ಪೂರ್ವ: ಶರಾವತಿ ನದಿ ದಂಡೆ ಹಾಗೂ ರಿಜರ್ವ ಕ್ಯಾಂಪ್ ಗಡಿ | ಸೀತಾಕಟ್ಟೆ ಸೇತುವೆಯ ಆರಂಭಿಸಿ ಪಶ್ಚಿಮಾಭಿಮುಖವಾಗಿ ಚಲಿಸಿ ಶರಾವತಿ ನದಿಯ ಅಂಚಿನ ಎಡಭಾಗದ ವಸತಿ ಗೃಹದ ಎಂ ಜಿ ಹೆಚ್ ಎಡಭಾಗ ಸೇರಿಕೊಂಡಂತೆ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಮುಂಭಾಗದ ರಸ್ತೆಯ ಎಡಬದಿಯ ಪ್ರದೇಶ ಕೆ ಪಿ ಸಿ ಆಸ್ಪತ್ರೆ ಪ್ರದೇಶ ಒಳಗೊಂಡು, ಶಾಲೆಯ ಆಟದ ಮೈದನದ ಎದುರಿಗೆ ಪೂರ್ವಾಭಿಮುಖವಾಗಿ ಚಲಿಸಿ ಎಸ್ ಇ ಮೌಂಟ್ ರಾಜ್ ಸೀಟ್ ಪ್ರದೇಶಗಳನ್ನು ಒಳಗೊಂಡು ಎಸ್ ವಿ ಪಿ ಮುಖ್ಯ ರಸ್ತೆಯ ಎಡಭಾಗದ ಪ್ರದೇಶಗಳನ್ನು ಒಳಗೊಂಡು ಎಂ ಜಿ ಹೆಚ್ ವೃತ್ತದ ಮೂಲಕ ಆಗ್ನೇಯಕ್ಕೆ ತಿರುಗಿ ಜೋಗ ಬಜಾರ್ ಲೈನ್ ರಸ್ತೆ ಮೂಲಕ ಐ ಹೆಚ್ ಬಿ ಕ್ಯಾಂಪ್ ಕ್ರಿಸ್ತ ದೇವಾಲಯದ ಎಡಭಾಗ ಹಾಗೂ ವಿ ವಿ ಎನ್ ಎಲ್ ಪಿ ಯು ಕಾಲೇಜ್ ರಸ್ತೆಯ ಕ್ರೈಸ್ತ ದೇವಾಲಯ ಒಳಗೊಂಡು ಪ್ರದೇಶ ಎಸ್ ಹೆಚ್ 50 ಯ ಯೂತ್ ಹಾಸ್ಟೆಲ್ ವೃತ್ತದಲ್ಲಿ ದಕ್ಷಿಣಾಭಿಮುಖವಾಗಿ ಚಲಿಸಿ ತೂಗು ಸೇತುವೆ ಉದ್ದಕ್ಕೂ ಚಲಿಸಿ ಜೋಗ ಫಾಲ್ಸ್ |

| | | | |
|---|---|---|---|
| | | ಪಶ್ಚಿಮ : ಎಸ್ ವಿ ಪಿ ಮುಖ್ಯ ರಸ್ತೆಯಿಂದ ಹಿರಿಯ ಪ್ರಾಥಮಿಕ ಶಾಲೆ ಮುಂಭಾಗ ಹಾದು ಹೋಗುವ ರಸ್ತೆ ಗಡಿ | ಒಳಗೊಂಡಂತೆ ಹಾಗೂ ಎಡಭಾಗದ ಪಿ ಡಬ್ಲ್ಯೂ ಡಿ ಪ್ರದೇಶ ಮೇಲೆ ಚಲಿಸಿ ನಂತರ ದಕ್ಷಣಾಭಿಮುಖವಾಗಿ ತಿರುಗಿ ನದಿ ದಂಡೆಯ ಎಡಭಾಗದ ಪ್ರದೇಶ ಒಳಗೊಂಡು ಸೀತಾ ಕಟ್ಟೆ ಸೇತುವೆಗೆ ಬಂದು ಸೇರುತ್ತದೆ. |
| 9. | ಜೋಗ್–ಕಾರ್ಗಲ್–9 | ಉತ್ತರ: ಗಾಂಧಿ ಪಾರ್ಕ ನಿಂದ ಎಸ್.ವಿ.ಪಿ ಹೋಗುವ ಮುಖ್ಯ ರಸ್ತೆ<br>ದಕ್ಷಿಣ: ಹೆಲ್ತ್ ಕ್ಯಾಂಪ್ ಆಶ್ರಯ ಕಾಲೋನಿ ಗಡಿ<br>ಪೂರ್ವ: ಗಾಂಧಿ ಪಾರ್ಕ ನಿಂದ ರಾಮ ಮಂದಿರ ರೆಡ್ಡಿ ಬ್ಲಾಕ್ ಗಡಿ<br>ಪಶ್ಚಿಮ: ಎಸ್.ವಿ.ಪಿ. ಎಸ್.ಬಿ.ಎಂ. ಬ್ಯಾಂಕ್ ಮತ್ತು ಆಟದ ಮೈದಾನ ಮತ್ತು ಜಿ.ಟೈಪ್ ಗಡಿ | ಗಾಂಧಿ ಪಾರ್ಕ ವೃತ್ತದಿಂದ ಆರಂಭಗೊಂಡು ವಾಯುವ್ಯಾಭಿಮುಖವಾಗಿ ಚಲಿಸಿ SVP ರಸ್ತೆ ಮುಖಾಂತರ ಹಾದು ಎಂ.ಜಿ.ಎಂ. ಪಾರ್ಕ ವೃತ್ತದಿಂದ ಆರಂಭಗೊಂಡು ಪಶ್ಚಿಮಾಭಿಮುಖವಾಗಿ ಚಲಿಸಿ ನಂತರ ಅದೇ ರಸ್ತೆಯ ಮುಖಾಂತರ ವಾಯುವ್ಯಾಭಿಮುಖವಾಗಿ ಚಲಿಸಿ ಅದೇ ರಸ್ತೆಯ ಮುಖಾಂತರ ದಕ್ಷಿಣಕ್ಕೆ ತಿರುಗಿ ಎದುರಿನ ಅಂಚೆ ಕಛೇರಿಯ ರಸ್ತೆ ಮುಖಾಂತರ ಅಂಚೆ ಕಚೇರಿಯ ಪಕ್ಕದ ಭೂತರಾಯನ ದೇವಸ್ಥಾನ ಸೇರಿದಂತೆ ಆಟದ ಮೈದಾನದ ಎಡ ಮತ್ತು ಬಲ ಭಾಗದ ಪ್ರದೇಶಗಳನ್ನು ಒಳಗೊಂಡು ಹಾಗೂ ಜಿ ಟೈಪ್ ವಸತಿ ಗೃಹ ಒಳಗೊಂಡು ಎದುರಿನ ಟಿಎಂ ಶೆಡ್ ಮತ್ತು ರೆಡ್ಡಿ ಬ್ಲಾಕ್ ಪ್ರದೇಶಗಳನ್ನೊಳಗೊಂಡು ರೆಡ್ಡಿ ಬ್ಲಾಕ್ ರಸ್ತೆಯ ಎಡ ಮತ್ತು ಬಲ ಭಾಗದ ವ್ಯಾಪ್ತಿಯ ಪ್ರದೇಶಗಳನ್ನೊಳಗೊಂಡು ಟಿ ಎಂ ಶೆಡ್ ನಿಂದ ಎಂ.ಜಿ ಪಾರ್ಕ ರಸ್ತೆಯ ಎಡಭಾಗದ ಪ್ರದೇಶಗಳನ್ನೊಳಗೊಂಡು ಎಂಜಿ ಪಾರ್ಕ ವೃತ್ತದ ಆರಂಭ ಬಿಂದುವನ್ನು ತಲುಪುತ್ತದೆ. |
| 10. | ಜೋಗ್–ಕಾರ್ಗಲ್–10 | ಉತ್ತರ: ಶರಾವತಿ ನದಿ ದಂಡೆ ಮತ್ತು ಎಬಿ ಸೈಟ್ ವರೆಗೆ<br>ದಕ್ಷಿಣ: ದೇವರ ಮಕ್ಕಿ ಗಡಿ<br>ಪೂರ್ವ: ಈಶ್ವರ ದೇವಸ್ಥಾನದ ಗಡಿ<br>ಪಶ್ಚಿಮ: ಕಣೇಕಾರ್ ಮತ್ತು ಎಸ್.ವಿ.ಪಿ ಯಿಂದ ಹೆನ್ನಿಗೆ ಹೋಗುವ ರಸ್ತೆ | ಶರಾವತಿ ನದಿ ಕಣಿವೆಯ ಎಂ.ಜಿ.ಹೆಚ್ ವಿದ್ಯುದಾಗಾರದಿಂದ ಪ್ರಾರಂಭಗೊಂಡು ಪಶ್ಚಿಮಾಭಿಮುಖವಾಗಿ ಚಲಿಸಿ ನಂತರ ವಾಯುವ್ಯಕ್ಕೆ ತಿರುಗಿ ನದಿ ದಂಡೆಯಲ್ಲಿಯೇ ಹಾದು ತಿರುಗಿ ನದಿ ದಂಡೆಯವರೆಗೂ ಚಲಿಸಿ ಆನೆಬೈಲು ಪ್ರದೇಶದ ಶರಾವತಿ ವಿದ್ಯುದಾಗಾರದಿಂದ ದಕ್ಷಿಣಕ್ಕೆ ಹೆನ್ನೆ ರಸ್ತೆ ಸೇರುವ ಎಡಭಾಗದ ಪ್ರದೇಶಗಳನ್ನೊಳಗೊಂಡ ಬ್ರಿಡ್ಜ್ ಗೇಟಿನ ಮುಖಾಂತರ ದಕ್ಷಿಣಕ್ಕೆ ತಿರುಗಿ ಹೆನ್ನಿ ಎಸ್.ವಿ.ಪಿ ರಸ್ತೆ ಮುಖಾಂತರ ಪೂರ್ವಾಭಿಮುಖವಾಗಿ ಪಟ್ಟಣ ಪಂಚಾಯ್ತಿ ಗಡಿಯೊಳಗಿನ ಕಣೆಕರ, ಪಾತಿಮಾಪುರ,II ಮೌಂಟ್ ಪ್ರದೇಶಗಳನ್ನೊಳಗೊಂಡ ಕೆ.ಪಿ.ಸಿ ಕಛೇರಿ ಒಳಗೊಂಡ ಅಂಚೆ ಕಚೇರಿ ರಸ್ತೆ ಮುಖಾಂತರ ಎಸ್.ವಿ.ಪಿ ಮುಖ್ಯ ರಸ್ತೆಗೆ ಸೇರುವ ಎಡಭಾಗದ ಪ್ರದೇಶ ಒಳಗೊಂಡು ಎಸ್.ವಿ.ಪಿ ಸರ್ಕಾರಿ ಶಾಲೆಯ ಮುಂಭಾಗದ ರಸ್ತೆಯಲ್ಲಿ ಉತ್ತರಾಭಿಮುಖವಾಗಿ ಶಾಲೆಯನ್ನು ಒಳಗೊಂಡು ಚರ್ಚ ಮೌಂಟ್ ಪ್ರದೇಶ ಒಳಗೊಂಡು ಎಂ.ಜಿ.ಹೆಚ್ ವಿದ್ಯುದಾಗಾರದಲ್ಲಿ ಮೂಲಬಿಂದು ಸೇರುತ್ತದೆ. |
| 11 | ಜೋಗ ಕಾರ್ಗಲ್ –11 | ಉತ್ತರ : ಶರಾವತಿ ನದಿದಂಡೆ<br>ದಕ್ಷಿಣ: ತಲಕಳಲೆ ಅಣೆಕಟ್ಟು ಹಿನ್ನೀರಿನ ಗಡಿ<br>ಪೂರ್ವ: ಶರಾವತಿ ನದಿ ದಂಡೆ<br>ಪಶ್ಚಿಮ : ತಲಕಳಲೆ ಅಣೆಕಟ್ಟಿನ ಹಿನ್ನೀರು ಗಡಿ | ರಾಜ್ ಸೀಟ್ ಆನೆಬೈಲ್ ವಿದ್ಯುದಾಗಾರದಿಂದ ಪ್ರಾರಂಭಗೊಂಡು ಪಶ್ವಮಾಭಿಮುಖವಾಗಿ ಚಲಿಸಿ ಶರಾವತಿ ಎಡದಂಡೆಯ ಎಡಭಾಗದ ಪ್ರದೇಶಗಳನ್ನೊಳಗೊಂಡು ನಂತರ ದಕ್ಷಣಾಭಿಮುಖವಾಗಿ ಚಲಿಸಿ ನಂತರ ಪಟ್ಟಣ ಪಂಚಾಯಿತಿ ಗಡಿವರೆಗೆ ಚಲಿಸಿ ನಂತರ ಪೂರ್ವಾಭಿಮುಖವಾಗಿ ಪಟ್ಟಣ ಪಂಚಾಯಿತಿ ಗಡಿ ( ತಳಕಳಲೆ ಸ ನಂ. 116, 117, 118 ) ಹೆನ್ನಿ ಮರಾಠ ಕೇರಿ ಗುಂಡಿ ಬೈಲು ಪ್ರದೇಶವನ್ನೊಳಗೊಂಡು ಆನಂತರ ಆಗ್ನೇಯಾಭಿಮುಖವಾಗಿ ಚಲಿಸಿ ಪಟ್ಟಣ ಪಂಚಾಯಿತಿ ಗಡಿವರೆಗಿನ ಸುಂಕದ ಮನೆ ಹಗರೆ ಹತ್ತಿಗೂಡು ಪ್ರದೇಶಗಳನ್ನೊಳಗೊಂಡು ಸರ್ವೆ ನಂಬರ್ 74/156 ತದನಂತರ ಆಗ್ನೇಯಮುಖವಾಗಿ ಚಲಿಸಿ ಕಣೆಕರ್ ಗಡಿಯಿಂದ ಉತ್ತರಕ್ಕೆ ತಿರುಗಿ ಬ್ರಿಡ್ಜ್ ಗೇಟ್ ಮುಖಾಂತರ ಎಸ್ ವಿ ಪಿ ಯಿಂದ ಹೆನ್ನಿ ರಸ್ತೆಯ ಎಡಭಾಗದ ತಲಕಳಲೆ ಪ್ರದೇಶ ಒಳಗೊಂಡು ರಾಜ್ ಸೀಟ್ ನ ಶರಾವತಿ ವಿದ್ಯುದಾಗಾರಕ್ಕೆ ಬಂದು ಸೇರುವ ಎಡಭಾಗದ ಪ್ರದೇಶವನ್ನೊಳಗೊಂಡು ಮೂಲ ಬಿಂದು ತಲುಪುತ್ತದೆ. |

**ವಿಪುಲ್ ಬನ್ಸಲ್ ಭಾ.ಆ.ಸೇ**
ಜಿಲ್ಲಾಧಿಕಾರಿ
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಶನಿವಾರ, ಫೆಬ್ರವರಿ ೨೨, ೨೦೧೪ (ಫಾಲ್ಗುಣ ೩, ಶಕ ವರ್ಷ ೧೯೩೫) | ನಂ. ೧೪೩ |
|---|---|---|
| Part – IV-A | Bangalore, Saturday, February 22, 2014 (Phalguna 3, Shaka Varsha 1935) | No. 143 |

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ – I**

**ಸಂಖ್ಯೆ: ಒಇ 77 ಪೊಸಿಅ 2013, ಬೆಂಗಳೂರು, ದಿನಾಂಕ: 22–02–2014**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14)ರ 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ರಚಿಸಲು ಉದ್ದೇಶಿಸಿರುವ, ಕರ್ನಾಟಕ ರಾಜ್ಯ ಪೊಲೀಸ್ ಲಿಪಿಕ ಸೇವೆಗಳನ್ನು ಒಳಗೊಂಡ (ನೇಮಕಾತಿ) ನಿಯಮಗಳು, 2004 – ಇದರ ಕರಡನ್ನು, ಇದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ಹದಿನೈದು ದಿನಗಳ ಒಳಗಾಗಿ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಆಹ್ವಾನಿಸಿ, ದಿನಾಂಕ 31.01.2014ರ ಕರ್ನಾಟಕ ರಾಜ್ಯ ಪತ್ರ (ವಿಶೇಷ ಸಂಚಿಕೆ) ಭಾಗ–IV-Aನಲ್ಲಿ ಅಧಿಸೂಚನೆ ಸಂಖ್ಯೆ: ಒಇ 77 ಪೊಸಿಅ 2013, ಬೆಂಗಳೂರು ದಿನಾಂಕ 31.01.2014ಅನ್ನು ಪ್ರಕಟಿಸಿದ್ದುದರಿಂದ,

ಸದರಿ ರಾಜ್ಯ ಪತ್ರವನ್ನು 31.01.2014ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿದ್ದುದರಿಂದ;

ಮತ್ತು ಸದರಿ ಕರಡಿಗೆ ಸಂಬಂಧಪಟ್ಟಂತೆ, ಸರ್ಕಾರವು ಸ್ವೀಕರಿಸಿದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಪರಿಶೀಲಿಸಿದೆ.

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತದೆ : ಎಂದರೆ:–

**ನಿಯಮಗಳು**

**1. ಶೀರ್ಷಿಕೆ ಮತ್ತು ಪ್ರಾರಂಭ:**– (1) ಈ ನಿಯಮಗಳನ್ನು ಕರ್ನಾಟಕ ರಾಜ್ಯ ಪೊಲೀಸ್ ಲಿಪಿಕ ಸೇವೆಗಳನ್ನು ಒಳಗೊಂಡ (ನೇಮಕಾತಿ) (ತಿದ್ದುಪಡಿ) ನಿಯಮಗಳು, 2014 ಎಂದು ಕರೆಯತಕ್ಕದ್ದು.

(2) ಇವು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿಯ ತಿದ್ದುಪಡಿ:**– ಕರ್ನಾಟಕ ರಾಜ್ಯ ಪೊಲೀಸ್ ಲಿಪಿಕ ಸೇವೆಗಳನ್ನು ಒಳಗೊಂಡ (ನೇಮಕಾತಿ) ನಿಯಮಗಳು, 2004ರ ಅನುಸೂಚಿಯಲ್ಲಿ (ಇದರಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ):–

(ಎ) ಕ್ರಮ ಸಂಖ್ಯೆ 10ರಲ್ಲಿ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ (ಸಿವಿಲ್) ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಪಟ್ಟ ನಮೂದುಗಳಲ್ಲಿ:–

(i) (5)ನೇ ಅಂಕಣದಲ್ಲಿ "(ಎ) ನೇರ ನೇಮಕಾತಿಯಿಂದ ಶೇಕಡ ಎಪ್ಪತ್ತು" ಎಂಬ ಶೀರ್ಷಿಕೆಯ ಮೇರೆಗೆ, ಅಂದರೆ ಪೈಕಿ, (i) ಮತ್ತು (ii)ನೇ ಬಾಬಿಗೆ ಬದಲಾಗಿ, ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

"(i) ಪುರುಷ ಅಭ್ಯರ್ಥಿಗಳ ನೇರ ನೇಮಕಾತಿಯಿಂದ ಶೇಕಡ ನಲವತ್ತು: ಮತ್ತು

(ii) ಮಹಿಳಾ ಅಭ್ಯರ್ಥಿಗಳ ನೇರ ನೇರನೇಮಕಾತಿಯಿಂದ ಶೇಕಡ ಇಪ್ಪತ್ತು:"

(ii) (6)ನೇ ಅಂಕಣದಲ್ಲಿ "(ಸಿ) ಸೇವೆಯಲ್ಲಿರುವ ಅಭ್ಯರ್ಥಿಗಳ ವಿದ್ಯಾರ್ಹತೆ" ಎಂಬ ಶೀರ್ಷಿಕೆಯ ಮೇರೆಗೆ, (ii)ನೇ ಬಾಬಿನಲ್ಲಿ, "ಎಂಟು ವರ್ಷಗಳು" ಎಂಬ ಪದಗಳ ಬದಲಾಗಿ "ಐದು ವರ್ಷಗಳು" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು."

(ಬಿ) (5)ನೇ ಅಂಕಣದಲ್ಲಿ, ಕ್ರಮ ಸಂಖ್ಯೆ 14ರಲ್ಲಿ "ಪೊಲೀಸ್ ಕಾನ್ಸ್‌ಟೇಬಲ್ (ಸಿವಿಲ್) (ಪುರುಷ ಮತ್ತು ಮಹಿಳೆ)" ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಪಟ್ಟ ನಮೂದುಗಳಲ್ಲಿ, "ಪುರುಷ ಅಭ್ಯರ್ಥಿಗಳ ನೇರ ನೇಮಕಾತಿಯಿಂದ ಶೇಕಡ ತೊಂಭತ್ತು ಮತ್ತು ಮಹಿಳಾ ಅಭ್ಯರ್ಥಿಗಳ ನೇರ ನೇಮಕಾತಿಯಿಂದ ಶೇಕಡ ಹತ್ತು" ಎಂಬ ಪದಗಳ ಬದಲಾಗಿ, ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

"(i) ಪುರುಷ ಅಭ್ಯರ್ಥಿಗಳ ನೇರ ನೇಮಕಾತಿಯಿಂದ ಶೇಕಡ ಎಂಭತ್ತು: ಮತ್ತು

(ii) ಮಹಿಳಾ ಅಭ್ಯರ್ಥಿಗಳ ನೇರ ನೇರನೇಮಕಾತಿಯಿಂದ ಶೇಕಡ ಇಪ್ಪತ್ತು:"

(ಸಿ) (6)ನೇ ಅಂಕಣದಲ್ಲಿ, ಕ್ರಮ ಸಂಖ್ಯೆ 18ರ (ii)ನೇ ಬಾಬಿನಲ್ಲಿ, "(ಸಿ) ಸೇವೆಯಲ್ಲಿರುವ ಅಭ್ಯರ್ಥಿಗಳ ವಿದ್ಯಾರ್ಹತೆ" ಎಂಬ ಶೀರ್ಷಿಕೆಯ ಮೇರೆಗೆ, ಸಶಸ್ತ್ರ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಪಟ್ಟ ನಮೂದುಗಳಲ್ಲಿ, "ಎಂಟು ವರ್ಷಗಳು" ಎಂಬ ಪದಗಳ ಬದಲಾಗಿ, "ಐದು ವರ್ಷಗಳು" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

(ಡಿ) ಕ್ರಮ ಸಂಖ್ಯೆ 21ರಲ್ಲಿ, "ಸಶಸ್ತ್ರ ಪೊಲೀಸ್ ಕಾನ್ಸ್‌ಟೇಬಲ್" ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಪಟ್ಟ ನಮೂದುಗಳಲ್ಲಿ:–

"(i) "(ಬಿ) (5)ನೇ ಅಂಕಣದಲ್ಲಿ, ದೇಹದಾರ್ಢ್ಯತೆಯ ಪರೀಕ್ಷೆ (ಪಿಎಸ್‌ಟಿ)" ಎಂಬ ಶೀರ್ಷಿಕೆಯ ಮೇರೆಗೆ, ಮೊದಲನೇ ಪರಂತುಕದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತು ಪರಂತು, ಕರ್ನಾಟಕ ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬುಡಕಟ್ಟುಗಳ ಸಂದರ್ಭದಲ್ಲಿ, ದೇಹಧಾರ್ಢ್ಯತೆಯು ಈ ಮುಂದಿನಂತಿರತಕ್ಕದ್ದು:–

ಎತ್ತರ – 155 ಸೆಂ.ಮೀ.ಗಳು

ಎದೆಯ ಸುತ್ತಳತೆ – 75 ಸೆಂ.ಮೀ.ಗಳು (5 ಸೆಂ.ಮೀ.ಗಳ ಕನಿಷ್ಠ ವಿಸ್ತರಿಸುವುದರೊಂದಿಗೆ ಸಂಪೂರ್ಣವಾಗಿ ಹಿಗ್ಗಿಸಿದಾಗ)

"(ii) (6)ನೇ ಅಂಕಣದಲ್ಲಿ, (2)ನೇ ಬಾಬಿನ ತರುವಾಯ "(ಎ) ವಯೋಮಿತಿ ಎಂಬ ಶೀರ್ಷಿಕೆಯ ಮೇರೆಗೆ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಎ) ಕರ್ನಾಟಕ ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬುಡಕಟ್ಟು ಅಭ್ಯರ್ಥಿಗಳ ಸಂದರ್ಭದಲ್ಲಿ 30 ವರ್ಷಗಳು."

**ವಿವರಣೆ**:– ಸದರಿ ನಿಯಮಗಳ ಉದ್ದೇಶಕ್ಕಾಗಿ, ಬುಡಕಟ್ಟುಗಳು ಎಂದರೆ, "ಉತ್ತರ ಕನ್ನಡ–ಕಾರವಾರ, ದಕ್ಷಿಣ ಕನ್ನಡ–ಮಂಗಳೂರು, ಉಡುಪಿ, ಚಿಕ್ಕಮಗಳೂರು, ಶಿವಮೊಗ್ಗ, ಕೊಡಗು, ಚಾಮರಾಜನಗರ ಮತ್ತು ಮೈಸೂರು ಅರಣ್ಯಗಳಲ್ಲಿ ಸಿದ್ದಿಗರು, ಜೇನುಕುರುಬ, ಕಾಡುಕುರುಬ, ಯೆರವ, ಸೋಲಿಗ, ಕುಡಿಯ, ಗೌಡ್ಲು, ಹಸಲರು, ಮಲೈಕುಡಿಯ ಮತ್ತು ಕೊರಗ ಬುಡಕಟ್ಟು ಸಮುದಾಯಗಳಿಗೆ ಸೇರಿದ ಅಭ್ಯರ್ಥಿಗಳು."

(ಇ) (6)ನೇ ಅಂಕಣದಲ್ಲಿ, ಕ್ರಮ ಸಂಖ್ಯೆ 50ರಲ್ಲಿ "(ಸಿ) ಸೇವೆಯಲ್ಲಿರುವ ಅಭ್ಯರ್ಥಿಗಳ ವಿದ್ಯಾರ್ಹತೆ" ಎಂಬ ಶೀರ್ಷಿಕೆಯ ಮೇರೆಗೆ (ii)ನೇ ಬಾಬಿನಲ್ಲಿ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ (ಎಫ್‌ಪಿಬಿ) ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಪಟ್ಟ ನಮೂದುಗಳಲ್ಲಿ, "ಎಂಟು ವರ್ಷಗಳು" ಎಂಬ ಪದಗಳ ಬದಲಾಗಿ "ಐದು ವರ್ಷಗಳು" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

(ಎಫ್) (6)ನೇ ಅಂಕಣದಲ್ಲಿ ಕ್ರಮ ಸಂಖ್ಯೆ 57ರಲ್ಲಿ "(ಸಿ) ಸೇವೆಯಲ್ಲಿರುವ ಅಭ್ಯರ್ಥಿಗಳ ವಿದ್ಯಾರ್ಹತೆ" ಎಂಬ ಶೀರ್ಷಿಕೆಯ ಮೇರೆಗೆ (ii)ನೇ ಬಾಬಿನಲ್ಲಿ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ (ವೈರ್‌ಲೆಸ್) ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಪಟ್ಟ ನಮೂದುಗಳಲ್ಲಿ, "ಎಂಟು ವರ್ಷಗಳು" ಎಂಬ ಪದಗಳ ಬದಲಾಗಿ "ಐದು ವರ್ಷಗಳು" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

(ಜಿ) (6)ನೇ ಅಂಕಣದಲ್ಲಿ ಕ್ರಮ ಸಂಖ್ಯೆ 68ರಲ್ಲಿ "(ಸಿ) ಸೇವೆಯಲ್ಲಿರುವ ಅಭ್ಯರ್ಥಿಗಳ ವಿದ್ಯಾರ್ಹತೆ" ಎಂಬ ಶೀರ್ಷಿಕೆಯ ಮೇರೆಗೆ (ii)ನೇ ಬಾಬಿನಲ್ಲಿ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ (ರಾಜ್ಯ ಗುಪ್ತವಾರ್ತೆ) ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಪಟ್ಟ ನಮೂದುಗಳಲ್ಲಿ, "ಎಂಟು ವರ್ಷಗಳು" ಎಂಬ ಪದಗಳ ಬದಲಾಗಿ "ಐದು ವರ್ಷಗಳು" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

(ಹೆಚ್) "ಅಧೀಕ್ಷಕ" ಹುದ್ದೆಗಳ ಪ್ರವರ್ಗ ಕ್ರಮ ಸಂಖ್ಯೆ 88 ಮತ್ತು ಸದರಿ ಅಂಕಣದ ಮುಂದಕ್ಕೆ ಈ ಕೆಳಕಂಡಂತೆ ಪ್ರತ್ಯಾಯೋಜಿಸತಕ್ಕದ್ದು. ಎಂದರೆ

| | | | | |
|---|---|---|---|---|
| 88 | ಅಧೀಕ್ಷಕರು<br>(ರೂ.20,000 – ರೂ.36,300) | 190 | ಪ್ರಥಮ ದರ್ಜೆ ಸಹಾಯಕ ಮತ್ತು ಶೀಘ್ರಲಿಪಿಗಾರ ವೃಂದದಿಂದ 6:1 ಅನುಪಾತದಲ್ಲಿ ಮುಂಬಡ್ತಿ ನೀಡತಕ್ಕದ್ದು. ಪ್ರತಿ 7ನೇ ಖಾಲಿ ಹುದ್ದೆಯನ್ನು ಶೀಘ್ರಲಿಪಿಗಾರರಿಗೆ ಮುಂಬಡ್ತಿ ನೀಡುವುದರಿಂದ ಭರ್ತಿ ಮಾಡುವುದು. | ಪ್ರಥಮ ದರ್ಜೆ ಸಹಾಯಕ/ಶೀಘ್ರಲಿಪಿಗಾರರ ಹುದ್ದೆಯಲ್ಲಿ 3 ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರತಕ್ಕದ್ದು.<br>ಶೀಘ್ರಲಿಪಿಗಾರರ ವೃಂದದವರನ್ನು ಬಡ್ತಿಗೆ ಪರಿಗಣಿಸುವಾಗ ಇವರು 1 ವರ್ಷಕ್ಕೆ ಕಡಿಮೆ ಇಲ್ಲದಂತೆ ಪ್ರಥಮ ದರ್ಜೆ ಸಹಾಯಕ ಹುದ್ದೆಯಲ್ಲಿ ಕಾರ್ಯ ನಿರ್ವಹಿಸಿರತಕ್ಕದ್ದು. |

(ಐ) ಕ್ರಮ ಸಂಖ್ಯೆ 90ರಲ್ಲಿರುವ "ದ್ವಿತೀಯ ದರ್ಜೆ ಸಹಾಯಕ" ವೃಂದದ ಹುದ್ದೆಯ ಅಂಕಣದ ನಂತರ ಈ ಕೆಳಕಂಡಂತೆ ಪ್ರತ್ಯಾಯೋಜಿಸತಕ್ಕದ್ದು. ಎಂದರೆ,

| | | | | |
|---|---|---|---|---|
| 90೦ | ಹಿರಿಯ ಶೀಘ್ರಲಿಪಿಗಾರರು<br>(ರೂ.20,000 – ರೂ.36,300) | 10 | ಶೀಘ್ರಲಿಪಿಗಾರ ವೃಂದದಿಂದ ಮುಂಬಡ್ತಿ ಹೊಂದಲು<br>ಶೀಘ್ರಲಿಪಿಗಾರ ವೃಂದದಲ್ಲಿರುವ ವ್ಯಕ್ತಿಯು ಅಧೀಕ್ಷಕ ಹುದ್ದೆಗೆ ಅಥವಾ ಹಿರಿಯ ಶೀಘ್ರಲಿಪಿಗಾರರ ಹುದ್ದೆಗೆ ಮುಂಬಡ್ತಿಗೆ ಪರಿಗಣನೆಯ ಸಂದರ್ಭದಲ್ಲಿ ಇವುಗಳಲ್ಲಿ ಯಾವುದು ಮೊದಲೋ ಆ ಸಂಧರ್ಭಾನುಸಾರ ಹಿಂಪಡೆಯಲಾಗದ ಆಯ್ಕೆಯನ್ನು ನಿರ್ಧರಿಸಿಕೊಳ್ಳತಕ್ಕದ್ದು. ಒಂದು ಬಾರಿ ಯಾವ ವೃಂದದಲ್ಲಿ ಅಪೇಕ್ಷಿಸಿ ಹೋಗಲು ಆಯ್ಕೆಯನ್ನು ನಿರ್ಧರಿಸಿದಲ್ಲಿ ಅದು ಅಂತಿಮವಾಗಿದ್ದು ಭವಿಷ್ಯದಲ್ಲಿ ಅಧೀಕ್ಷಕರ ಹಾಗೂ ಹಿರಿಯ ಶೀಘ್ರಲಿಪಿಗಾರರ ವೃಂದದಿಂದ ಪರಸ್ಪರ ಬದಲಾವಣೆಗೆ ಅವಕಾಶವಿರುವುದಿಲ್ಲ. | ಶೀಘ್ರಲಿಪಿಗಾರರ ಹುದ್ದೆಯಲ್ಲಿ 7 ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರಬೇಕು.<br>ಒಂದು ವೇಳೆ 7 ವರ್ಷ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿದ ವ್ಯಕ್ತಿಯು ಲಭ್ಯವಿಲ್ಲದಿದ್ದ ಪಕ್ಷದಲ್ಲಿ 5 ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ವ್ಯಕ್ತಿಯನ್ನು ಮುಂಬಡ್ತಿಗೆ ಪರಿಗಣಿಸತಕ್ಕದ್ದು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

## ಅಧಿಸೂಚನೆ – II

**ಸಂಖ್ಯೆ: ಒಇ 77 ಪೊಸಿಅ 2013, ಬೆಂಗಳೂರು, ದಿನಾಂಕ: 22–02–2014**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14)ರ 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ರಚಿಸಲು ಉದ್ದೇಶಿಸಿರುವ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು, 2009 – ಇದರ ಕರಡನ್ನು, ಇದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ಹದಿನೈದು ದಿನಗಳ ಒಳಗಾಗಿ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಆಹ್ವಾನಿಸಿ, ದಿನಾಂಕ 31.01.2014ರ ಕರ್ನಾಟಕ ರಾಜ್ಯ ಪತ್ರ (ವಿಶೇಷ ಸಂಚಿಕೆ) ಭಾಗ–IV-Aನಲ್ಲಿ ಅಧಿಸೂಚನೆ ಸಂಖ್ಯೆ: ಒಇ 77 ಪೊಸಿಅ 2013, ಬೆಂಗಳೂರು ದಿನಾಂಕ 31.01.2014ಅನ್ನು ಪ್ರಕಟಿಸಿದ್ದುದರಿಂದ,

ಸದರಿ ರಾಜ್ಯ ಪತ್ರವನ್ನು 31.01.2014ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿದ್ದುದರಿಂದ;

ಮತ್ತು ಸದರಿ ಕರಡಿಗೆ ಸಂಬಂಧಪಟ್ಟಂತೆ ಸರ್ಕಾರವು, ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸ್ವೀಕರಿಸದಿರುವುದರಿಂದ;

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತದೆ : ಎಂದರೆ:–

### ನಿಯಮಗಳು

**1. ಶೀರ್ಷಿಕೆ ಮತ್ತು ಪ್ರಾರಂಭ:**– (1) ಈ ನಿಯಮಗಳನ್ನು ಕರ್ನಾಟಕ ರಾಜ್ಯ ಮೀಸಲು ಪೊಲೀಸ್ (ನೇಮಕಾತಿ ಮತ್ತು ಸೇವಾ ಷರತ್ತುಗಳು) (ತಿದ್ದುಪಡಿ) ನಿಯಮಗಳು, 2014 ಎಂದು ಕರೆಯತಕ್ಕದ್ದು.

(2) ಇವು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿಯ ತಿದ್ದುಪಡಿ:**– ಕರ್ನಾಟಕ ರಾಜ್ಯ ಮೀಸಲು ಪೊಲೀಸ್ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು, 2009ರ ಅನುಸೂಚಿಯಲ್ಲಿ (ಇದರಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ):–

(ಎ) (7)ನೇ ಅಂಕಣದ ಕ್ರಮ ಸಂಖ್ಯೆ: 15ರಲ್ಲಿ ವಿಶೇಷ ಮೀಸಲು ಪೊಲೀಸ್ (ಪುರುಷ) ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಪಟ್ಟ ನಮೂದುಗಳಲ್ಲಿ:–

(i) "II. ವಯೋಮಿತಿ" ಎಂಬ ಶೀರ್ಷಿಕೆಯ ಮೇರೆಗೆ, (iii)ನೇ ಬಾಬಿನ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(iii) ಕರ್ನಾಟಕ ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬುಡಕಟ್ಟು ಅಭ್ಯರ್ಥಿಗಳ ಸಂದರ್ಭದಲ್ಲಿ ಮೂವತ್ತು ವರ್ಷಗಳು."

(ii) "IV. ದೇಹದಾರ್ಢ್ಯತೆ ಪರೀಕ್ಷೆ" ಎಂಬ ಶೀರ್ಷಿಕೆಯ ಮೇರೆಗೆ, ಈ ಮುಂದಿನ ಪರಂತುಕವನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ಕರ್ನಾಟಕ ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬುಡಕಟ್ಟು ಅಭ್ಯರ್ಥಿಗಳ ಸಂದರ್ಭದಲ್ಲಿ, ದೇಹದಾರ್ಢ್ಯತೆಯು ಈ ಮುಂದಿನಂತಿರತಕ್ಕದ್ದು:–

ಎತ್ತರ – 155 ಸೆಂ.ಮೀ.ಗಳು

ಎದೆಯ ಸುತ್ತಳತೆ – 5 ಸೆಂ.ಮೀ.ಗಳ ಕನಿಷ್ಠ ವಿಸ್ತರಿಸುವುದರೊಂದಿಗೆ ಸಂಪೂರ್ಣವಾಗಿ ಹಿಗ್ಗಿಸಿದಾಗ 75 ಸೆಂ.ಮೀ.ಗಳಿಗಿಂತ ಕಡಿಮೆ ಇಲ್ಲದಂತೆ.

(ಬಿ) (7)ನೇ ಅಂಕಣದ ಕ್ರಮ ಸಂಖ್ಯೆ: 16ರಲ್ಲಿ ವಿಶೇಷ ಮೀಸಲು ಪೊಲೀಸ್ ಕಾನ್ಸ್‌ಟೇಬಲ್ (ಮಹಿಳೆ) ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಪಟ್ಟ ನಮೂದುಗಳಲ್ಲಿ:–

(i) "II. ವಯೋಮಿತಿ" ಎಂಬ ಶೀರ್ಷಿಕೆಯ ಮೇರೆಗೆ, (ii)ನೇ ಬಾಬಿನ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(iii) ಕರ್ನಾಟಕ ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬುಡಕಟ್ಟು ಅಭ್ಯರ್ಥಿಗಳ ಸಂದರ್ಭದಲ್ಲಿ ಮೂವತ್ತು ವರ್ಷಗಳು."

(ii) "IV. ದೇಹದಾರ್ಢ್ಯತೆ ಪರೀಕ್ಷೆ" ಎಂಬ ಶೀರ್ಷಿಕೆಯ ಮೇರೆಗೆ, ಈ ಮುಂದಿನ ಪರಂತುಕವನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ಕರ್ನಾಟಕ ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬುಡಕಟ್ಟು ಅಭ್ಯರ್ಥಿಗಳ ಸಂದರ್ಭದಲ್ಲಿ, ದೇಹದಾರ್ಢ್ಯತೆಯು ಈ ಮುಂದಿನಂತಿರತಕ್ಕದ್ದು:–

ಎತ್ತರ – 150 ಸೆಂ.ಮೀ.ಗಳು

ತೂಕ – 45 ಕೆ.ಜಿ.ಗೆ ಕಡಿಮೆ ಇಲ್ಲದಂತೆ

**ವಿವರಣೆ:**– ಸದರಿ ನಿಯಮಗಳ ಉದ್ದೇಶಕ್ಕಾಗಿ, ಬುಡಕಟ್ಟುಗಳು ಎಂದರೆ, "ಉತ್ತರ ಕನ್ನಡ–ಕಾರವಾರ, ದಕ್ಷಿಣ ಕನ್ನಡ–ಮಂಗಳೂರು, ಉಡುಪಿ, ಚಿಕ್ಕಮಗಳೂರು, ಶಿವಮೊಗ್ಗ, ಕೊಡಗು, ಚಾಮರಾಜನಗರ ಮತ್ತು ಮೈಸೂರು ಅರಣ್ಯಗಳಲ್ಲಿ ಸಿದ್ದಿಗರು, ಜೇನುಕುರುಬ, ಕಾಡುಕುರುಬ, ಯೆರವ, ಸೋಲಿಗ, ಕುಡಿಯ, ಗೌಡ್ಲು, ಹಸಲರು, ಮಲೈಕುಡಿಯ ಮತ್ತು ಕೊರಗ ಬುಡಕಟ್ಟು ಸಮುದಾಯಗಳಿಗೆ ಸೇರಿದ ಅಭ್ಯರ್ಥಿಗಳು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೇಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

## ಅಧಿಸೂಚನೆ – III

### ಸಂಖ್ಯೆ: ಒಇ 77 ಪೊಸಿಅ 2013, ಬೆಂಗಳೂರು, ದಿನಾಂಕ: 22–02–2014

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14)ರ 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ರಚಿಸಲು ಉದ್ದೇಶಿಸಿರುವ, ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ದಳ (ವೃಂದ ಮತ್ತು ನೇಮಕಾತಿ) ನಿಯಮಗಳು, 2011 – ಇದರ ಕರಡನ್ನು, ಇದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ಹದಿನೈದು ದಿನಗಳ ಒಳಗಾಗಿ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಆಹ್ವಾನಿಸಿ, ದಿನಾಂಕ 31.01.2014ರ ಕರ್ನಾಟಕ ರಾಜ್ಯ ಪತ್ರ (ವಿಶೇಷ ಸಂಚಿಕೆ) ಭಾಗ–IV-Aನಲ್ಲಿ ಅಧಿಸೂಚನೆ ಸಂಖ್ಯೆ: ಒಇ 77 ಪೊಸಿಅ 2013, ಬೆಂಗಳೂರು ದಿನಾಂಕ 31.01.2014ಅನ್ನು ಪ್ರಕಟಿಸಿದ್ದುದರಿಂದ,

ಸದರಿ ರಾಜ್ಯ ಪತ್ರವನ್ನು 31.01.2014ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿದ್ದುದರಿಂದ;

ಮತ್ತು ಸದರಿ ಕರಡಿಗೆ ಸಂಬಂಧಪಟ್ಟಂತೆ ಸರ್ಕಾರವು, ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸ್ವೀಕರಿಸದಿರುವುದರಿಂದ;

